KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೨ | ಬೆಂಗಳೂರು, ಗುರುವಾರ, ಜನವರಿ ೧೮, ೨೦೦೭ (ಪುಷ್ಯ ೨೮, ಶಕ ವರ್ಷ ೧೯೨೮) | ಸಂಚಿಕೆ ೩ |
|---|---|---|

## ಭಾಗ - ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು.

ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರ ಕಛೇರಿ,
ನಂ. 17, ಜಯನಿವಾಸ, ಶಂಕರಮಠ ರಸ್ತೆ, ಬಸವನಗುಡಿ, ಬೆಂಗಳೂರು-560 004.
ಟೆಂಡರ್ ಮತ್ತು ಬಹಿರಂಗ ಹರಾಜು

**ಪ್ರಕಟಣೆ ಸಂಖ್ಯೆ: ಎಸ್.ಟಿ.ಎನ್./ವಾ.ಹ.ಟೆಂಡರ್/59/130/2006-07, ದಿನಾಂಕ: 15ನೇ ಡಿಸೆಂಬರ್ 2006**

ಈ ಕಛೇರಿಯ ಹಳೆಯ ಪೆಟ್ರೋಲ್ ವಾಹನ ಅಂಬಾಸಿಡರ್ ಕಾರ್ ಸಂಖ್ಯೆ **ಎಂಇಜೆ.-4917** ನ್ನು ಟೆಂಡರ್ ಹಾಗೂ ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು. ವಾಹನದ ವಿವರ ಈ ಕೆಳಕಂಡಂತಿದೆ.

| ಕ್ರಮ ಸಂಖ್ಯೆ | ವಾಹನ ಸಂಖ್ಯೆ | ಮಾದರಿ | ತಯಾರಿಕೆ ವರ್ಷ |
|---|---|---|---|
| 01. | ಎಂಇಜೆ.-4917 | ಅಂಬಾಸಿಡರ್ ಕಾರ್ (ಪೆಟ್ರೋಲ್) | 1980 |

ಟೆಂಡರ್ ಮತ್ತು ಬಹಿರಂಗ ಹರಾಜಿನಲ್ಲಿ ಭಾಗವಹಿಸುವವರು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಭಾಗವಹಿಸತಕ್ಕದ್ದು.

01. ಆಸಕ್ತಿಯುಳ್ಳ ವ್ಯಕ್ತಿಗಳು ಮೇಲೆ ತಿಳಿಸಿದ ವಾಹನ ಅಂಬಾಸಿಡರ್ ಕಾರು ಸಂಬಂಧವಾಗಿ ಮೊಹರಾದ ಲಕೋಟೆಯಲ್ಲಿ ತಮ್ಮ ಟೆಂಡರ್‌ನ್ನು ಮಾತ್ರ ನಿರ್ದೇಶಕರು, ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಇಲಾಖೆ, ಇವರಿಗೆ ದಿನಾಂಕ 29***-01-2007 ರಂದು ಸಂಜೆ*** 04.30 ಗಂಟೆ ಅಥವಾ ಅದಕ್ಕೂ ಮುಂಚೆ ತಲುಪುವಂತೆ ಸಲ್ಲಿಸಬೇಕು.
02. ಹರಾಜು ಮಾರಾಟವು ***31-01-2007*** ರಂದು ಮಧ್ಯಾಹ್ನ 12.30 ಗಂಟೆಗೆ ಮೇಲೆ ತಿಳಿಸಿರುವ ಕಛೇರಿಯ ಆವರಣದಲ್ಲಿ ಪ್ರಾರಂಭವಾಗುವುದು. ಆಸಕ್ತಿಯುಳ್ಳ ಸವಾಲುಗಾರರು ಸಾರ್ವತ್ರಿಕ ರಜೆ ದಿನಗಳನ್ನು ಹೊರತು ಪಡಿಸಿ ಬೆಳಿಗ್ಗೆ 11.30 ಗಂಟೆಯಿಂದ ಸಾಯಂಕಾಲ 5.00 ಗಂಟೆಯವರೆಗೆ ವಾಹನವನ್ನು ಈ ಕಛೇರಿಯ ಆವರಣದಲ್ಲಿ ಪರೀಕ್ಷಿಸಬಹುದು. ಮೇಲೆ ತಿಳಿಸಿದ ವಾಹನದ ಬಗ್ಗೆ ಯಾವುದೇ ಖಾತರಿ ನೀಡಲಾಗುವುದಿಲ್ಲ. ವಾಹನವನ್ನು ಇದ್ದಲ್ಲಿ ಇದ್ದಂತೆಯೇ ವಿಲೇವಾರಿ ಮಾಡಲಾಗುವುದು ಮತ್ತು ಹಾಗೆಯೇ ತೆಗೆದುಕೊಂಡು ಹೋಗಬೇಕು. ಈ ಸಂಬಂಧವಾಗಿ ಯಾವುದೇ ಪತ್ರ ವ್ಯವಹಾರವನ್ನು ಪುರಸ್ಕರಿಸುವುದಿಲ್ಲ.
03. ಟೆಂಡರ್‌ನ್ನು ಮೊಹರಾದ ಲಕೋಟೆಯ ಮೇಲೆ "**ಹಳೆಯ ಎಂಇಜೆ.**-4917 ಅಂಬಾಸಿಡರ್ ಪೆಟ್ರೋಲ್ ಕಾರ್ ವಿಲೇವಾರಿಗೆ ಟೆಂಡರ್" ಎಂದು ಮೇಲ್ಬರಹ ಬರೆದು ಸಲ್ಲಿಸಬೇಕು.
04. ಟೆಂಡರ್‌ನ ಮುಂಗಡವಾಗಿ **ರೂ. 3,000.00 ವನ್ನು (ಮೂರು ಸಾವಿರ ರೂಪಾಯಿಗಳು ಮಾತ್ರ)** ಠೇವಣಿಯಾಗಿ (EMD) ಪ್ರತ್ಯೇಕವಾಗಿ ಡೈರೆಕ್ಟರ್ ಆಫ್ ಕೋ-ಆಪರೇಟಿವ್ ಆಡಿಟ್ (Director of Cooperative Audit), ರವರ ಹೆಸರಿನಲ್ಲಿ ಪಡೆದ ಡಿ.ಡಿ. ಮುಖಾಂತರ ಸಲ್ಲಿಸಬೇಕು. (ಟೆಂಡರ್ ಲಕೋಟೆಯಲ್ಲಿ ಡಿ.ಡಿಯನ್ನು ಇರಿಸಕೂಡದು) ಮತ್ತು ಡಿ.ಡಿ. ನೀಡಿದ್ದಕ್ಕೆ ಸ್ವೀಕೃತಿಯನ್ನು ಪಡೆಯತಕ್ಕದ್ದು. ಈ ಮುಂಗಡ ಠೇವಣಿಗೆ ಯಾವುದೇ ಬಡ್ಡಿ ನೀಡಲಾಗುವುದಿಲ್ಲ.
05. ನಿರ್ದೇಶಕರಿಂದ ನೇಮಿಸಲ್ಪಡುವ ಅಧಿಕಾರಿಗಳು ಬಹಿರಂಗ ಹರಾಜು ನಡೆಸುವರು. ಠೇವಣಿಯನ್ನು ತುಂಬಿದ ಟೆಂಡರ್‌ದಾರರು, ಬಿಡ್‌ದಾರರು ಮಾತ್ರ ಹರಾಜಿನಲ್ಲಿ ಭಾಗವಹಿಸಲು ಅರ್ಹರಿರುತ್ತಾರೆ.

06. ಬಹಿರಂಗ ಹರಾಜಿನಲ್ಲಿ ಅತಿ ಹೆಚ್ಚಿನ ಬೆಲೆಯನ್ನು ದಾಖಲೆಗೊಳಿಸಿದ ನಂತರ ಸ್ವೀಕೃತವಾದ ಟೆಂಡರ್‌ಗಳನ್ನು ಹರಾಜುದಾರರ/ಬಿಡ್‌ದಾರರ ಸಮಕ್ಷಮ ತೆರೆದು ಬಹಿರಂಗ ಪಡಿಸಲಾಗುವುದು. ಈ ಎರಡರಲ್ಲಿ ಅತಿ ಹೆಚ್ಚಿನ ದರವನ್ನು ಯಾರು ನಮೂದಿಸುವರೋ ಅವರನ್ನು ಯಶಸ್ವಿ ಟೆಂಡರ್‌ದಾರ/ಬಿಡ್‌ದಾರ ಎಂದು ಪರಿಗಣಿಸಲಾಗುವುದು.

07. ಠೇವಣಿ ಹಣವನ್ನು (ಡಿ.ಡಿ.) ಅತಿ ಹೆಚ್ಚಿನ ಅಂತಿಮ ಬಹಿರಂಗ ಹರಾಜು ಕಂ ಟೆಂಡರ್‌ದಾರರೆಂದು ಪರಿಗಣಿಸಿ, ಉಳಿದವರಿಗೆ ಠೇವಣಿ ಹಣವನ್ನು (ಡಿ.ಡಿ.) ಹರಾಜು ಮುಗಿದ ನಂತರ ಸ್ಥಳದಲ್ಲಿಯೇ ಹಿಂದಿರುಗಿಸಲಾಗುವುದು.

08. ಮುಂಗಡ ಹಣ ಠೇವಣಿ (ಡಿ.ಡಿ) ಹೊಂದಿರದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.

09. ಟೆಂಡರ್ ಯಾವುದೇ ಷರತ್ತು ಹೊಂದಿರತಕ್ಕದ್ದಲ್ಲ ಮತ್ತು ಷರತ್ತು ಹೊಂದಿದ್ದರೆ ಅಂತಹ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.

10. ಅತಿ ಹೆಚ್ಚು ಬಹಿರಂಗ/ಟೆಂಡರ್‌ದಾರರು ಸ್ಥಳದಲ್ಲಿಯೇ ಪೂರ್ತಿ ಹಣವನ್ನು ನಗದಾಗಿ ಪಾವತಿಸತಕ್ಕದ್ದು.

11. ಮೊದಲನೆ ಅತಿ ಹೆಚ್ಚಿನ ಬಹಿರಂಗ ಹರಾಜು ಕಂ ಟೆಂಡರ್‌ದಾರರು ಹಣ ಪಾವತಿಸಿದ ನಂತರವೇ ಎರಡನೇ ಅತಿ ಹೆಚ್ಚಿನ ಅಂತಿಮ ಬಹಿರಂಗ ಹರಾಜು ಕಂ ಟೆಂಡರ್‌ದಾರರ ಹಣವನ್ನು ವಾಪಾಸು ಮಾಡಲಾಗುವುದು. ಒಂದು ವೇಳೆ ಮೊದಲನೇ ಅತಿ ಹೆಚ್ಚಿನ ಬಹಿರಂಗ ಹರಾಜು ಕಂ ಟೆಂಡರ್‌ದಾರರು ಪೂರ್ತಿ ಹಣ ಪಾವತಿಸದೇ ಇದ್ದಲ್ಲಿ ಅದೇ ದಿನ ಎರಡನೇ ಬಿಡ್ಡುದಾರರು ಅರ್.ಟಿ.ಓ. ಅವರು ನಿಗದಿಪಡಿಸಿದ ಹಣಕ್ಕಿಂತ ಹೆಚ್ಚಿಗೆ ಬಹಿರಂಗ ಹರಾಜು ಕಂ ಟೆಂಡರ್ ಇದ್ದಲ್ಲಿ ನೀಡಲಾಗುವುದು.

12. ಹರಾಜು ಕಂ ಟೆಂಡರ್ ಅಂಗೀಕರಿಸುವ ಅಥವಾ ತಿರಸ್ಕರಿಸುವ ಅಧಿಕಾರ ಹರಾಜು ಕಂ ಟೆಂಡರ್ ಪ್ರಕ್ರಿಯೆ ನಡೆಸುವ ಪ್ರಾಧಿಕಾರಕ್ಕೆ ಸೇರುತ್ತದೆ.

13. ಹರಾಜು ಕಂ ಟೆಂಡರ್ ಪ್ರಾರಂಭವಾಗುವ ಸಮಯಕ್ಕೆ ಸರಿಯಾಗಿ ಎಲ್ಲಾ ಬಿಡ್ಡುದಾರರು ಭಾಗವಹಿಸತಕ್ಕದ್ದು. ಕಂಡಿಕೆ (2) ರಲ್ಲಿ ತಿಳಿಸಿರುವಂತೆ ಹರಾಜು ಪ್ರಕ್ರಿಯೆ ಮುಗಿದ ನಂತರ ಬಂದ ಸವಾಲುದಾರರಿಗೆ ಯಾವುದೇ ಹಕ್ಕು ಇರುವುದಿಲ್ಲ.

14. ಹರಾಜು ಕಂ ಟೆಂಡರ್‌ನಲ್ಲಿ ಭಾಗವಹಿಸುವವರು ಈ ಎಲ್ಲಾ ನಿಯಮದ ಷರತ್ತುಗಳನ್ನು ಒಪ್ಪಿಕೊಳ್ಳಲು ಬದ್ಧರಿದ್ದೇವೆಂದು ಈ ಕಛೇರಿಯ ಹರಾಜು ಕಂ ಟೆಂಡರ್ ಪುಸ್ತಕದಲ್ಲಿ ಸಹಿ ಮಾಡತಕ್ಕದ್ದು.

15. ಯಶಸ್ವಿ ಟೆಂಡರ್‌ದಾರ/ಸವಾಲುದಾರರು ಸವಾಲಿನ ಬೆಲೆಯನ್ನು ಅದೇ ದಿನ ನಗದು ಪಾವತಿಸತಕ್ಕದ್ದು. ತಪ್ಪಿದಲ್ಲಿ ಠೇವಣಿಯಾಗಿದ್ದ ಮುಂಗಡ ಹಣವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುತ್ತದೆ.

16. ನಿರ್ದೇಶಕರು ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಇಲಾಖೆ ರವರು ಮಾರಾಟವನ್ನು ಖಚಿತಪಡಿಸಿದ ನಂತರ ಮಾರಾಟವು ಪೂರ್ಣಗೊಳ್ಳುತ್ತದೆ.

17. ಕರ್ನಾಟಕ ಮಾರಾಟ ತೆರಿಗೆ/ಕೇಂದ್ರ ಮಾರಾಟ ತೆರಿಗೆ (ಸಂದರ್ಭಾನುಸಾರ) ಪ್ರಚಲಿತ ದರದಂತೆ ಅನ್ವಯವಾಗು ವಂತೆ, ಅದೇ ದಿನ ಪಾವತಿಸಬೇಕು. ಟೆಂಡರ್ ಕಂ ಹರಾಜು ಹಣ ಮತ್ತು ಇದಕ್ಕೆ ಅನ್ವಯವಾಗುವ ತೆರಿಗೆಗಳು ಪ್ರತ್ಯೇಕವಾಗಿರುತ್ತದೆ.

18. ಸಂದಾಯ/ವಶಾವಣೆ/ಎಲ್ಲಾತೆರಿಗೆ/ಕೇಂದ್ರ ಮಾರಾಟ ತೆರಿಗೆಗಳು ಮತ್ತು ಸುಂಕಗಳು ಪ್ರತ್ಯೇಕವಾಗಿರತಕ್ಕದ್ದು. ವಾಹನಗಳ ಹಣ ಸಂದಾಯದ ವಶಾವಣೆ ಪಡೆಯುವ ಸಂದರ್ಭದಲ್ಲಿ ಅನ್ವಯವಾಗುವ ತೆರಿಗೆಗಳ ಜೊತೆಗೆ ಟೆಂಡರ್ ಕಂ ಹರಾಜು ಹಣವನ್ನು ನಿರ್ದೇಶಕರು, ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಇಲಾಖೆ, ಇವರಿಗೆ ಸಂದಾಯ ಮಾಡತಕ್ಕದ್ದು. ತೆರಿಗೆಗಳ ಜೊತೆಗೆ ಟೆಂಡರ್ ಹಾಗೂ ಮಾರಾಟದಿಂದ ಬಂದ ಹಣವನ್ನು ಸಂದಾಯ ಮಾಡಿ ನಿರ್ದೇಶಕರು, ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಇಲಾಖೆ, ಬೆಂಗಳೂರು, ಇವರಿಂದ ಪಡೆದ ವಶಾವಣೆ ಆದೇಶವನ್ನು ಪಡೆದ ನಂತರವೇ ವಾಹನವನ್ನು ತೆಗೆದುಕೊಂಡು ಹೋಗಲು ಅನುಮತಿಸಲಾಗುವುದು.

19. ವಾಹನವನ್ನು ಇದ್ದಲ್ಲಿ ಇದ್ದಂತೆಯೇ ಮಾರಾಟ ಮಾಡುವುದರಿಂದ ಕೊಳ್ಳುವವರು ತಮ್ಮೊಂದಿಗೆ ವರ್ಗಾವಣೆ ಆದೇಶದ ಪ್ರತಿಗಳು, ಮಾರಾಟ ತೆರಿಗೆ ಫಾರಂ ಇತರ ಯಾವುದೇ ಚಲನ್‌ಗಳನ್ನು ವ್ಯವಸ್ಥೆ ಮಾಡಿಕೊಳ್ಳುವ ಜವಾಬ್ದಾರಿಯನ್ನು ಕೊಳ್ಳುವವರೆ ವ್ಯವಸ್ಥೆ ಮಾಡಿಕೊಳ್ಳತಕ್ಕದ್ದು.

20. ಟೆಂಡರ್ ಕಂ ಹರಾಜು ಪ್ರಕ್ರಿಯೆ ಮುಗಿದ ನಂತರ (ಕಂಡಿಕೆ 14 ರಲ್ಲಿ ತಿಳಿಸಿರುವಂತೆ) ಆರ್.ಸಿ. ಪುಸ್ತಕ ಮತ್ತು ತೆರಿಗೆ ವಿನಾಯಿತಿ ಪತ್ರಗಳನ್ನು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಬೆಂಗಳೂರು ದಕ್ಷಿಣ, ಬೆಂಗಳೂರು, ರವರಿಗೆ ವಾಹನ ವರ್ಗಾವಣೆಗೆ ಕಳುಹಿಸಲಾಗುವುದು.

21. ಈ ಹರಾಜು ಕಂ ಟೆಂಡರ್ ಈ ಕಛೇರಿಯ ಪ್ರಾಧಿಕಾರಕ್ಕೆ ಒಳಪಟ್ಟಿರುತ್ತದೆ ಮತ್ತು ಇದರ ಕುರಿತು ನ್ಯಾಯಾಲಯದಲ್ಲಿ ಪ್ರಶ್ನಿಸುವಂತಿರುವುದಿಲ್ಲ.

22. ಹರಾಜಿನಲ್ಲಿ ಬಿಡ್ ಮಾಡಿದ ವಾಹನವನ್ನು ನಿರ್ದೇಶಕರಿಂದ ಅನುಮೋದನೆ ಪಡೆದ ನಂತರ ತಮಗೆ ತಿಳಿಸಿದ ದಿನಾಂಕದೊಳಗೆ ಈ ಕಛೇರಿಯ ಆವರಣದಿಂದ ತಮ್ಮ ಸ್ವಂತ ಖರ್ಚಿನಲ್ಲಿ ತೆಗೆದುಕೊಂಡು ಹೋಗತಕ್ಕದ್ದು. ಹೀಗೆ ವಾಹನವನ್ನು ತೆಗೆದು ಕೊಂಡು ಹೋಗದೆ ಇದ್ದಲ್ಲಿ ವಾಹನದ ಜವಾಬ್ದಾರಿಯು ಕೊಂಡು ಕೊಳ್ಳುವವರದ್ದಾಗಿರುತ್ತದೆ.

23. ಹರಾಜು ಪ್ರಕ್ರಿಯೆಯಲ್ಲಿ ಯಾವುದೇ ವಾದ ವಿವಾದ ಉದ್ಭವಿಸಿದಲ್ಲಿ ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರು ನೀಡುವ ನಿರ್ಣಯವೇ ಅಂತಿಮವಾಗಿರುತ್ತದೆ.

**ಎಂ.ಎಸ್. ಉಮೇಶ್‌ಚಂದ್ರ**

ಪಿ.ಆರ್. 12

ಸಹಕಾರ ಸಂಘಗಳ ಲೆಕ್ಕಪರಿಶೋಧನಾ
ನಿರ್ದೇಶಕರು.

## ಅಧ್ಯಕ್ಷರು ಮತ್ತು ಅಧೀಕ್ಷಕರು ಟೆಂಡರ್ ಸಮಿತಿ, ಚಿಗಟೇರಿ ಜಿಲ್ಲಾ ಆಸ್ಪತ್ರೆ, ದಾವಣಗೆರೆ
## ಅಧೀಕ್ಷಕರವರ ಕಾರ್ಯಾಲಯ, ಚಿಗಟೇರಿ ಜಿಲ್ಲಾ ಆಸ್ಪತ್ರೆ, ದಾವಣಗೆರೆ
### ಸಂಕ್ಷಿಪ್ತ ಟೆಂಡರ್ ಪ್ರಕಟಣೆ ನಂ.ಚಿಜಿಆ/ಲೆಪ(4)/ಪ್ರಸಂ.24/2006-07, ದಿನಾಂಕ: 18ನೇ ಡಿಸೆಂಬರ್ 2006

**ವಿಷಯ:** 2007-08ನೇ ಸಾಲಿಗೆ ಚಿಗಟೇರಿ ಜಿಲ್ಲಾ ಆಸ್ಪತ್ರೆ ದಾವಣಗೆರೆ ಇಲ್ಲಿಗೆ ಆಹಾರ ಪದಾರ್ಥಗಳನ್ನು ಮತ್ತು ಬ್ರೆಡ್ ಮತ್ತು ಹೆಚ್.ಎನ್.ಎಸ್. ವಸ್ತುಗಳನ್ನು ಸರಬರಾಜು ಮಾಡಲು ಟೆಂಡರ್ ಕರೆಯುವ ಬಗ್ಗೆ.

**ಉಲ್ಲೇಖ:** ಸರ್ಕಾರ ಆದೇಶ ಸಂ.ಎಲ್‌ಎಂ 196 ಪಿಟಿಡಿ 64, ದಿ: 30.12.1964.

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಚಿಗಟೇರಿ ಜಿಲ್ಲಾ ಆಸ್ಪತ್ರೆ ದಾವಣಗೆರೆ ಇಲ್ಲಿಗೆ (ಟೆಂಡರ್ ಅಂಗೀಕೃತವಾದ ದಿನಾಂಕದಿಂದ 31.3.2008ರ ಅವಧಿಗೆ) ಬೇಕಾಗುವ ಆಹಾರ ಪದಾರ್ಥಗಳು, ಪ್ರಥಮ ದರ್ಜೆ ಬ್ರೆಡ್ ಮತ್ತು ಅವಶ್ಯಕ ವಸ್ತುಗಳನ್ನು ಸರಬರಾಜು ಮಾಡಲು ಜಿಲ್ಲಾ ಶಸ್ತ್ರ ಚಿಕಿತ್ಸಕರು, ಚಿಗಟೇರಿ ಜಿಲ್ಲಾ ಆಸ್ಪತ್ರೆ ದಾವಣಗೆರೆ ಇವರ ಹೆಸರಿನಲ್ಲಿ ಮೊಹರು ಮಾಡಿದ ಟೆಂಡರನ್ನು ದಿನಾಂಕ: 20.2.07ರ ಮಧ್ಯಾಹ್ನ 1-00 ಗಂಟೆಗೆ ಕರೆಯಲಾಗಿದೆ. ಮೊಹರಾದ ಟೆಂಡರ್‌ಗಳನ್ನು ಅದೇ ದಿನ ಟೆಂಡರ್ ಕಮಿಟಿಯ ಸಮಕ್ಷಮದಲ್ಲಿ ಮಧ್ಯಾಹ್ನ 3-30 ಗಂಟೆಗೆ ಟೆಂಡರ್ ಲಕೋಟೆಗಳನ್ನು ತೆರೆಯಲಾಗುವುದು. ಮುದ್ರಿತ ನಮೂನೆಯಲ್ಲಿ ಆಹಾರ ಸಾಮಗ್ರಿ, ಉತ್ತಮ ದರ್ಜೆಯ ಬ್ರೆಡ್ ಮತ್ತು ಹೆಚ್.ಎನ್.ಎಸ್. ವಸ್ತುಗಳಿಗಾಗಿ ಪ್ರತ್ಯೇಕವಾಗಿ 4 ಪ್ರತಿಗಳಲ್ಲಿ ಭರ್ತಿ ಮಾಡಿದ ಮೊಹರಾದ ಕೆಳಕಾಣಿಸಿದಂತೆ ನಿಗದಿತ ದಿನಾಂಕ ಹಾಗೂ ವೇಳೆಯಲ್ಲಿ ಸ್ವೀಕರಿಸಲಾಗುವುದು.

| ಕ್ರ. ಸಂ. | ಸರಬರಾಜು ಮಾಡಬೇಕಾದ ವಸ್ತುಗಳು | ಟೆಂಡರ್ ನಿಗದಿಪಡಿಸಿದ ದಿನಾಂಕ ಹಾಗೂ ಸಮಯ | ಟೆಂಡರ್ ಫಾರಂಗಳನ್ನು ತೆರೆಯುವ ದಿನಾಂಕ |
|---|---|---|---|
| 1. | ಆಹಾರ ಪದಾರ್ಥಗಳು (ಅಕ್ಕಿ ಮತ್ತು ಸಕ್ಕರೆಯನ್ನು ಹೊರತುಪಡಿಸಿ) | 20-02-07 01-00 ಮಧ್ಯಾಹ್ನ | 20-02-07 03-30 ಮಧ್ಯಾಹ್ನ |
| 2. | ಪ್ರಥಮ ದರ್ಜೆ ಬ್ರೆಡ್ (ಸಮನಾಗಿ ಹೋಳು ಮಾಡಿ ಕಾಗದದಲ್ಲಿ ಸುತ್ತಿದ್ದು) | 20-02-07 01-00 ಮಧ್ಯಾಹ್ನ | 20-02-07 03-30 ಮಧ್ಯಾಹ್ನ |
| 3. | ಆಸ್ಪತ್ರೆಯ ಅವಶ್ಯಕ ವಸ್ತುಗಳು | 20-02-07 01-00 ಮಧ್ಯಾಹ್ನ | 20-02-07 03-30 ಮಧ್ಯಾಹ್ನ |

ಇಚ್ಛೆಯುಳ್ಳ ಟೆಂಡರ್‌ದಾರರು ಪ್ರತಿಯೊಂದು ಐಟಂಗೆ ನಿಗದಿತ ನಮೂನೆ 4 ಪ್ರತಿಗಳಲ್ಲಿ ನಿಗದಿಪಡಿಸಿರುವ ದಿನಾಂಕ ಮತ್ತು ನಿಗದಿತ ವೇಳೆಗೆ ಟೆಂಡರನ್ನು ಸಲ್ಲಿಸತಕ್ಕದ್ದು.

ಮುದ್ರಿತ ಟೆಂಡರ್ ಫಾರಂಗಳನ್ನು ಭಾನುವಾರ ಮತ್ತು ರಜಾ ದಿನಗಳನ್ನು ಹೊರತುಪಡಿಸಿ ಕಛೇರಿಯ ಕೆಲಸದ ವೇಳೆಯಲ್ಲಿ ಒಂದು ಪ್ರತಿಗೆ ರೂ. 25-00 ರಂತೆ 4 ಪ್ರತಿಗಳಿಗೆ ರೂ. 100-00 ಗಳನ್ನು ಪಾವತಿಸಿ ದಿನಾಂಕ: 17.2.2007ರ ಮಧ್ಯಾಹ್ನ 4-00 ಗಂಟೆಯವರೆಗೆ ಕಛೇರಿಯಲ್ಲಿ ಪಡೆಯಬಹುದು. ಒಂದೊಂದು ಐಟಂಗೂ ಪ್ರತ್ಯೇಕವಾಗಿ ಫಾರಂಗಳನ್ನು ಪಡೆಯತಕ್ಕದ್ದು. ಇದಕ್ಕೆ ಸಂಬಂಧಿಸಿದಂತೆ ಎಲ್ಲಾ ಷರತ್ತು ಹಾಗೂ ಇನ್ನಿತರ ಹೆಚ್ಚಿನ ವಿವರಗಳನ್ನು ಈ ಕಛೇರಿಯಿಂದ ಪಡೆಯಬಹುದು. ಇಚ್ಛೆಯುಳ್ಳ ಟೆಂಡರ್‌ದಾರರು ನಿಬಂಧನೆ ಪ್ರಕಾರ ಕೆಳಗೆ ಕಾಣಿಸಿದ ದಾಖಲೆಗಳನ್ನು ಟೆಂಡರ್ ಜೊತೆಗೆ ಲಗತ್ತಿಸಬೇಕು.

1) ಟೆಂಡರ್ ಒಪ್ಪಂದದ ಹಾಗೂ ಟೆಂಡರ್ ನಿಬಂಧನೆಗಳನ್ನು ಹಾಗೂ ಕರಾರಿನ ನಿಯಮಗಳನ್ನು ಓದಿ ಅರ್ಥ ಮಾಡಿಕೊಂಡಿರುತ್ತೇವೆ ಮತ್ತು ಅದರಂತೆ ನಡೆದುಕೊಳ್ಳುತ್ತೇವೆ ಎಂಬುದಾಗಿ ದೃಢೀಕರಣ ನೀಡತಕ್ಕದ್ದು.
2) ಇ.ಎಂ.ಡಿ. ಟೆಂಡರ್ ಮೊತ್ತ ಶೇ. 5% ರಂತೆ ರಾಷ್ಟ್ರೀಕೃತ ಬ್ಯಾಂಕುಗಳಲ್ಲಿ ಅಧೀಕ್ಷಕರು, ಚಿಗಟೇರಿ ಜಿಲ್ಲಾ ಆಸ್ಪತ್ರೆ, ದಾವಣಗೆರೆ ಇವರ ಹೆಸರಿನಲ್ಲಿ ಪಡೆದ ಡಿ.ಡಿ.ಯನ್ನು ಲಗತ್ತಿಸತಕ್ಕದ್ದು.
3) ಟೆಂಡರ್ ಮೊತ್ತದ ಶೇ.25 ರಷ್ಟು ಸಾಲ್ವೆನ್ಸಿ ಸರ್ಟಿಫಿಕೇಟನ್ನು ರೆವಿನ್ಯೂ ಅಧಿಕಾರಿಗಳಿಂದ ಯೋಗ್ಯತಾ ಪತ್ರವನ್ನು ಪಡೆದಿರಬೇಕು. ಅಥವಾ ಸಹಕಾರಿ ಸಂಸ್ಥೆಗೆ ರಿಜಿಸ್ಟ್ರಾರ್ ರವರಿಂದ ಅಥವಾ ಬ್ಯಾಂಕಿನಿಂದ ಉತ್ತಮ ಆರ್ಥಿಕ ಸ್ಥಿತಿಯ ಬಗ್ಗೆ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು. ಜಂಟಿ ಸಾಲ್ವೆನ್ಸಿ ಯೋಗ್ಯತಾ ಪತ್ರವನ್ನು ಪರಿಗಣಿಸಲಾಗುವುದಿಲ್ಲ.
4) ಟೆಂಡರ್ ಸಲ್ಲಿಸುವ ಹಿಂದಿನ ಮೂರು ವರ್ಷಗಳ ಅವಧಿಯ ಆದಾಯ ತೆರಿಗೆ ಮತ್ತು ಮಾರಾಟ ತೆರಿಗೆ ಕಟ್ಟಿದಕ್ಕೆ ಪ್ರಮಾಣ ಪತ್ರವನ್ನು ನಿಗಧಿತ ನಮೂನೆಯಲ್ಲಿ ಸಲ್ಲಿಸತಕ್ಕದ್ದು ಮತ್ತು ಇತ್ತೀಚಿನ ವ್ಯಾಟ್ ಪಾವತಿಸಿದ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು.
5) ದರ ಮತ್ತು ಬೆಲೆಗಳನ್ನು ಅಂಕೆಯಲ್ಲಿ ಮತ್ತು ಅಕ್ಷರಗಳಲ್ಲಿ ಸ್ಪಷ್ಟವಾಗಿ ಮತ್ತು ಸರಿಯಾಗಿ ನಮೂದಿಸಬೇಕು. ದರಗಳನ್ನು ತಿದ್ದಿದ ಪಕ್ಷದಲ್ಲಿ ಅಲ್ಲಿ ಟೆಂಡರದಾರರು ಸಹಿ ಮಾಡತಕ್ಕದ್ದು.
6) ಯಶಸ್ವಿ ಟೆಂಡರ್‌ದಾರರು ಟೆಂಡರ್ ಮೊತ್ತದ ಶೇ.10 ರಷ್ಟು (ಶೇ.5 ರಷ್ಟು ಸಹಕಾರಿ ಸಂಘಗಳಿಗೆ) ನಿಶ್ಚಿತ ಭದ್ರತಾ ಠೇವಣಿ ಸಲ್ಲಿಸತಕ್ಕದ್ದು. ಮತ್ತು ರೂ.100-00 ಬೆಲೆ ಸ್ಟ್ಯಾಂಪ್ ಪೇಪರ್‌ನಲ್ಲಿ ಒಪ್ಪಂದ ಪತ್ರವನ್ನು ಸಲ್ಲಿಸತಕ್ಕದ್ದು.
7) ಸೂಚಿಸಿರುವ ಕಾಲ ಮತ್ತು ದಿನಾಂಕವನ್ನು ಮೀರಿ ಬಂದ ಟೆಂಡರಗಳನ್ನು ತಿರಸ್ಕರಿಸಲಾಗುವುದು.
8) ಟೆಂಡರ್ ಅವಧಿಯಲ್ಲಿ ಯಾವುದೇ ಆಹಾರ ಪದಾರ್ಥಗಳ ಮತ್ತು ಬ್ರೆಡ್ಡಿನ ದರದಲ್ಲಿ ವ್ಯತ್ಯಾಸವಾದರೆ ಟೆಂಡರ್ ದರವನ್ನು ಒಟ್ಟು ವ್ಯತ್ಯಾಸದ ದರವನ್ನು ಹೊಂದಲು ವಿಜೇತವಾದ ಟೆಂಡರ್‌ದಾರರು ಅರ್ಹರಾಗಿರುವುದಿಲ್ಲ. ಈ ನಿಬಂಧನೆಯನ್ನು ಸಹ ಒಪ್ಪಂದ ಪತ್ರದಲ್ಲಿ ನಮೂದಿಸಬೇಕು.
9) ಪ್ರತಿ ತಿಂಗಳು ಟೆಂಡರ್‌ದಾರರಿಂದ ಶೇ. 2 ರಂತೆ ಆದಾಯ ತೆರಿಗೆಯನ್ನು ಪ್ರತಿ ತಿಂಗಳ ಬಿಲ್ಲಿನಲ್ಲಿ ಕಟಾವು ಮಾಡಲಾಗುವುದು.
10) ಯಾವುದೇ ಕಾರಣ ಕೊಡದೆ ಟೆಂಡರನ್ನು ಒಪ್ಪಿಕೊಳ್ಳುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಅಧೀಕ್ಷಕರು, ಜಿಲ್ಲಾ ಆಸ್ಪತ್ರೆ, ದಾವಣಗೆರೆ ಇವರಿಗೆ ಕಾಯ್ದಿರಿಸಲ್ಪಟ್ಟಿದೆ.
11) ಬ್ರೆಡ್ ಸರಬರಾಜಿಗಾಗಿ ಟೆಂಡರ್ ಸಲ್ಲಿಸಲು ಇಚ್ಛಿಸುವ ಟೆಂಡರ್‌ದಾರರು ಚಾಲ್ತಿಯಲ್ಲಿರುವ ಬೇಕರಿ ಲೈಸೆನ್ಸ್‌ನ ಪ್ರತಿಯನ್ನು ಲಗತ್ತಿಸಬೇಕು.
12) ಮೊಹರಾದ ಟೆಂಡರ್‌ಗಳ ಲಕೋಟೆಯ ಮೇಲೆ ದಪ್ಪ ಅಕ್ಷರಗಳಲ್ಲಿ ಯಾವ ಪೂರೈಕೆಗಾಗಿ ಟೆಂಡರ್ ಸಲ್ಲಿಸಲಾಗಿದೆ ಎಂಬುದನ್ನು ಬರೆಯಬೇಕು.
13) ಗುತ್ತಿಗೆ ಅವಧಿಯಲ್ಲಿ ಪದಾರ್ಥಗಳನ್ನು ಸರಬರಾಜು ಮಾಡುವ ಬಗ್ಗೆ ಥವಾ ಗುಣಮಟ್ಟ ಸರಿಯಾಗಿಲ್ಲದ ಪಕ್ಷದಲ್ಲಿ ಅತೃಪ್ತಿಕರ ಕಂಡು ಬಂದರೆ ಗುತ್ತಿಗೆ ಅವಧಿಯು ಮುಗಿಯುವ ಮೊದಲೇ ಅಥವಾ ಯಾವಾಗಲಾದರೂ ಒಂದು ತಿಂಗಳ ಮುಂಚಿತವಾಗಿ ಸೂಚನೆ ನೀಡಿ ಗುತ್ತಿಗೆಯನ್ನು ವಜಾ ಮಾಡುವ ಹಕ್ಕನ್ನು ಈ ಕಛೇರಿ ಹೊಂದಿರುತ್ತದೆ.
14) ಗುತ್ತಿಗೆದಾರರು ಪ್ರತಿ ತಿಂಗಳು 5ನೇ ತಾರೀಖಿನೊಳಗೆ ಹಿಂದಿನ ತಿಂಗಳ ಬಿಲ್ಲನ್ನು ದೃಢೀಕರಿಸಿ ಪಾವತಿಗಾಗಿ ಸಲ್ಲಿಸತಕ್ಕದ್ದು.
15) ಗುತ್ತಿಗೆದಾರರು ಮುಂದಿನ ಸರ್ಕಾರಿ ಕಾನೂನುಗಳಿಗೆ ಬದ್ಧರಾಗಿರಬೇಕು.

16) ಅಂಗೀಕೃತವಾದ ದರಕ್ಕಿಂತ ಹೆಚ್ಚುವರಿ ದರಕ್ಕೆ ಗುತ್ತಿಗೆದಾರರಿಂದ ಯಾವುದೇ ಮನವಿ ಪತ್ರವನ್ನು ಸ್ವೀಕರಿಸುವುದಿಲ್ಲ. ಒಂದು ವೇಳೆ ಸಲ್ಲಿಸಿದ ಪಕ್ಷದಲ್ಲಿ ಅದು ಸ್ವಯಂ ತಿರಸ್ಕೃತ ಎಂದು ಪರಿಗಣಿಸಲಾಗುವುದು.
17) ಆಸ್ಪತ್ರೆಗಳಿಗೆ ಇತರೆ ಸಂಸ್ಥೆಗಳಿಗೆ ಸರಬರಾಜು ಮಾಡಿರುವ ಬಗ್ಗೆ ಅನುಭವ ದೃಢೀಕರಿಸಿದ ಪ್ರಮಾಣ ಪತ್ರ ನೀಡುವುದು ಪ್ರತಿಯನ್ನು ಲಗತ್ತಿಸಬೇಕು.
18) ಇ.ಎಂ.ಡಿ. ಹಣವನ್ನು ಪಾವತಿಸುವುದಕ್ಕೆ ರಿಯಾಯಿತಿ ಇರುವ ಸಹಕಾರಿ ಸಂಘ ಸಂಸ್ಥೆಗಳು ಸರ್ಕಾರಿ ಆದೇಶವನ್ನು ಲಗತ್ತಿಸಬೇಕು.
19) ಸಂಬಂಧಪಟ್ಟ ಸರ್ಕಾರಿ ಇಲಾಖೆಗಳಲ್ಲಿ ನೊಂದಣಿ ಮಾಡಿಸಿದ ನೊಂದಣಿ ಪ್ರಮಾಣ ಪತ್ರವನ್ನು ದೃಢೀಕರಿಸಿದ ಪ್ರತಿನ್ನು ಲಗತ್ತಿಸಬೇಕು.
20) ವರಮಾನ ತೆರಿಗೆ ಪಾವತಿಸಿರುವ ಪ್ರಮಾಣ ಪತ್ರಗಳು ಅಥವಾ ವಿನಾಯಿತಿ ಇದ್ದರೆ ವಿನಾಯಿತಿ ಪ್ರಮಾಣ ಪತ್ರವನ್ನು ಲಗತ್ತಿಸತಕ್ಕದ್ದು. ಚಾಲ್ತಿಯಲ್ಲಿರುವ ಹಿಂದಿನ ಮೂರು ವರ್ಷಗಳ ವರಮಾನ ತೆರಿಗೆ ಪಾವತಿಸಿರುವ ಪ್ರಮಾಣ ಪತ್ರ.
21) ತಾಜಾ ಬ್ರೆಡ್ಡನ್ನು 400 ಗ್ರಾಂ, 800 ಗ್ರಾಂ ಪ್ಯಾಕೇಟಗಳಲ್ಲಿ ಸರಬರಾಜು ಮಾಡತಕ್ಕದ್ದು. ಪ್ರತಿ ಕೆ.ಜಿ.ಯ ದರ ನಮೂದಿಸತಕ್ಕದ್ದು. ಪ್ಯಾಕೇಟ ಮೇಲೆ ಚಿಗಟೇರಿ ಜಿಲ್ಲಾ ಆಸ್ಪತ್ರೆ, ದಾವಣಗೆರೆ ಎಂದು ನಮೂದಿಸಬೇಕು.
22) ಸಣ್ಣ ಕೈಗಾರಿಕೆಯಲ್ಲಿ ಟೆಂಡರ್‌ದಾರರು ನೊಂದಾಯಿಸಿರುವ ಬೇಕರಿ ಲೈಸನ್ಸ್‌ನ ಪ್ರತಿಯನ್ನು ಲಗತ್ತಿಸಬೇಕು.
23) ಮಾರಾಟ ತೆರಿಗೆ ಇರುವಂತಹ ಪದಾರ್ಥಗಳಿಗೆ ತೆರಿಗೆ ಸೇರಿ ದರ ನಮೂದಿಸತಕ್ಕದ್ದು.
24) ಒಂದು ಮೊಟ್ಟೆ 45 ಗ್ರಾಂ ನಿಂದ 57 ಗ್ರಾಂ ವರೆಗೆ ತೂಕವಿರುವ ಮೊಟ್ಟೆಯನ್ನು ಸರಬರಾಜು ಮಾಡತಕ್ಕದ್ದು.
25) ಗುತ್ತಿಗೆದಾರರು ಬೆಳಿಗ್ಗೆ 6-30 ಗಂಟೆಗೆ ಸರಿಯಾಗಿ ಆಹಾರ ಪದಾರ್ಥಗಳು, ಬ್ರೆಡ್, ಮೊಟ್ಟೆಗಳನ್ನು ಹಾಗೂ ಇನ್ನಿತರೆ ವಸ್ತುಗಳನ್ನು ಮಾಡತಕ್ಕದ್ದು.

ಪಿ.ಡಿ. 3 ಅಧೀಕ್ಷಕರು, ಚಿಗಟೇರಿ ಜಿಲ್ಲಾ ಆಸ್ಪತ್ರೆ, ದಾವಣಗೆರೆ.

**ಅಡಿಷನಲ್ ಡೈರೆಕ್ಟರ್ ಜನರಲ್ ಆಫ್ ಪೋಲೀಸ್, ಟೆಲಿಕಮ್ಯೂನಿಕೇಶನ್, ಟ್ರಾನ್ಸ್‌ಪೋರ್ಟ್ ಮತ್ತು ಮಾಡರ್‌ನೈಜೇಶನ್‌ರವರ ಕಛೇರಿ,**
**ನಂ. 1, ಎಂ.ಜಿ.ರಸ್ತೆ, ಬೆಂಗಳೂರು – 560 001**
**ಸಂಖ್ಯೆ. ಸಂಗ್ರಹ– II/22/MDN/2006–07, ದಿನಾಂಕ: 09ನೇ ಜನವರಿ 2007**
**ಅಲ್ಪಾವಧಿ ಟೆಂಡರ್ ಪ್ರಕಟಣೆ**

2006–07ನೇ ಸಾಲಿಗೆ ಪೋಲೀಸ್ ಇಲಾಖೆಯ ಅಗತ್ಯವಿರುವ ಈ ಕೆಳಕಂಡ ಉಪಕರಣಗಳನ್ನು ಸರಬರಾಜು ಮಾಡಲು ಮೊಹರು ಮಾಡಿರುವ ದರಪಟ್ಟಿಗಳನ್ನು (ಟೆಂಡರ್) **"ದ್ವಿ ಲಕೋಟೆ ಪದ್ಧತಿಯಲ್ಲಿ"** ಅಹ್ವಾನಿಸಲಾಗಿದೆ

**"ಡೀಸೆಲ್ ಜನರೇಟರ್ ಮತ್ತು ಧ್ವನಿವರ್ಧಕ ಉಪಕರಣಗಳು"**

**ಸೂಚನೆ:** ಮೇಲಿನ ಉಪಕರಣಗಳ ಉತ್ಪಾದಕರು / ಉತ್ಪಾದಕರ ಘಟಕ/ಉತ್ಪಾದಕ ಘಟಕದ ಅಧಿಕೃತ ಏಜಂಟುದಾರರು, ಪ್ರಖ್ಯಾತ ಕಂಪನಿಯ ಬ್ರಾಂಡ್‌ಗಳಿಗೆ ಆದ್ಯತೆ ನೀಡಲಾಗುವುದು.

2. ವಿವರ ಹಾಗೂ ಷರತ್ತನ್ನು ಒಳಗೊಂಡ ಟೆಂಡರ್ ಅರ್ಜಿಗಳನ್ನು ನಿರ್ದಿಷ್ಟತೆಯೊಂದಿಗೆ (Specifications) ದಿನಾಂಕ 16.01.2007ರಿಂದ 19.01.2007 ರವರೆಗೆ ಕಛೇರಿಯ ಕೆಲಸದ ದಿನದಂದು ಬೆಳಿಗ್ಗೆ 1000 ಘಂಟೆಯಿಂದ ಸಾಯಂಕಾಲ 04.00 ಘಂಟೆಯೊಳಗೆ ಸೂಪರಿಂಟೆಂಡೆಂಟ್ ಆಫ್ ಪೋಲೀಸ್, ವೈರ್‌ಲೆಸ್, ಬೆಂಗಳೂರುರವರ ಕಛೇರಿಯಲ್ಲಿ ಪಡೆಯಬಹುದು ಪ್ರತಿ ಟೆಂಡರ್ ಬೆಲೆ ರೂ.500/– ಆಗಿದ್ದು, ಇದನ್ನು ಮರುಪಾವತಿ ಮಾಡಲಾಗುವುದಿಲ್ಲ. ಟೆಂಡರ್ ಅರ್ಜಿಗಳನ್ನು ನಗದು ಅಥವಾ ಡಿ.ಡಿ ಮೂಲಕ ಮಾತ್ರ ಪಾವತಿಸಬಹುದಾಗಿದೆ (ಮನಿ ಆರ್ಡರ್ ಮೂಲಕ ಪಾವತಿಸಿದರೆ ಅಂಗೀಕರಿಸುವುದಿಲ್ಲ) ಟೆಂಡರ್ ಅರ್ಜಿಯನ್ನು ಅಂಚೆಯ ಮೂಲಕ ಪಡೆಯ ಬಯಸುವವರು ರೂ.500/–ಗಳಿಗೆ ಡಿ.ಡಿಯನ್ನು ಸೂಪರಿಂಟೆಂಡೆಂಟ್ ಆಫ್ ಪೋಲೀಸ್, ವೈರ್‌ಲೆಸ್, ಬೆಂಗಳೂರುರವರ ಹೆಸರಿನಲ್ಲಿ ಪಡೆದು ಕಳುಹಿಸಲು ಹಾಗೂ ಸ್ವವಿಳಾಸದೊಂದಿಗೆ ಲಕೋಟೆಯ ಮೇಲೆ ರೂ.30/–ಗಳ ಅಂಚೆ ಚೀಟಿ ಅಂಟಿಸಿ ಕಳುಹಿಸಲು ಕೋರಿದೆ.

3. ಟೆಂಡರ್ ಅರ್ಜಿಯನ್ನು ಮೊಹರು ಮಾಡಿದ ಎರಡು ಪ್ರತ್ಯೇಕ ಕವರ್‌ಗಳಲ್ಲಿ ಈ ಕೆಳಕಂಡಂತೆ ಕಳುಹಿಸಬೇಕಾಗಿರುತ್ತದೆ.

ಅ) ಮೊಹರು ಮಾಡಿದ ಒಂದನೇ ಕವರಿನ ಮೇಲ್ಭಾಗದಲ್ಲಿ **"ಉಪಕರಣಗಳ ಸರಬರಾಜಿಗಾಗಿ ಇ.ಎಂ.ಡಿ ಮತ್ತು ಇತರೆ ವಿವರಣೆ"** ಎಂದು ಹಾಗೂ ಕವರಿನ ಕೆಳಭಾಗದಲ್ಲಿ ಸರಬರಾಜು ಮಾಡುವ ಸಂಸ್ಥೆಯ ಹೆಸರು ಮತ್ತು ವಿಳಾಸವನ್ನು ನಮೂದಿಸಬೇಕು.

ಆ) ಮೊಹರು ಮಾಡಿದ ಎರಡನೇ ಕವರಿನ ಮೇಲ್ಭಾಗದಲ್ಲಿ **"ಉಪಕರಣಗಳ ಬೆಲೆ ಪಟ್ಟಿ"** ಎಂದು ಮತ್ತು ಕವರಿನ ಕೆಳಭಾಗದಲ್ಲಿ ಸರಬರಾಜು ಮಾಡುವ ಸಂಸ್ಥೆಯ ಹೆಸರು ಮತ್ತು ವಿಳಾಸವನ್ನು ನಮೂದಿಸಬೇಕು.

4. **ಮೊದಲನೆ ಕವರ್**: ಮೊಹರು ಮಾಡಿದ ಮೊದಲನೇ ಕವರಿನಲ್ಲಿ ಈ ಕೆಳಕಂಡ ಮಾಹಿತಿಯನ್ನು ಒಳಗೊಂಡಿರಬೇಕು

ಅ) ಸರಬರಾಜು ಮಾಡಲು ಇಚ್ಛಿಸುವ ಸಾಮಾಗ್ರಿಗಳಿಗೆ ಇ.ಎಂ.ಡಿಯ ಬಾಬ್ತು ಪ್ರತ್ಯೇಕವಾಗಿ ಸೂಪರಿಂಟೆಂಡೆಂಟ್ ಆಫ್ ಪೋಲೀಸ್, ವೈರ್‌ಲೆಸ್, ಬೆಂಗಳೂರು ರವರ ಹೆಸರಿನಲ್ಲಿ ಪಡೆದ ಡಿಮ್ಯಾಂಡ್ ಡ್ರಾಫ್ಟ್‌ಗಳು (ಇ.ಎಂ.ಡಿಯಲ್ಲಿ ನಮೂದಿಸಲಾದ ಸಾಮಗ್ರಿಯ ಒಟ್ಟು ಬೆಲೆಗೆ ಶೇಕಡ 2ರಷ್ಟು ಇರಬೇಕು) ಸರಬರಾಜು ಮಾಡುವ ಪ್ರತಿಯೊಂದು ಸಾಮಗ್ರಿಗಳಿಗೆ ಪ್ರತ್ಯೇಕ ಇ.ಎಂ.ಡಿಗಳನ್ನು ಸಲ್ಲಿಸಬೇಕು. ಇಲ್ಲದಿದ್ದಲ್ಲಿ ಪರಿಗಣಿಸಲಾಗುವುದಿಲ್ಲ.

ಆ) ಸರಬರಾಜು ಮಾಡುವ ಸಂಸ್ಥೆಯ ಸಾಮರ್ಥ್ಯದ ಬಗ್ಗೆ ಮಾಹಿತಿ ಮತ್ತು ಸರಬರಾಜು ಮಾಡುವ ಸಾಮಗ್ರಿಗಳನ್ನು ಉತ್ಪಾದಿಸಲಾಗುತ್ತಿದೆಯೇ ಅಥವಾ ಇಲ್ಲವೆ ಎಂಬ ಬಗ್ಗೆ ದಾಖಲಾತಿ.

ಇ) ಆರ್ಥಿಕ ಸ್ಥಿತಿ ಮತ್ತು ಸಾಮರ್ಥ್ಯದ ಬಗ್ಗೆ.

ಈ) ಮಾರಾಟ ತೆರಿಗೆ ಮತ್ತು ಆದಾಯ ತೆರಿಗೆ ಬಗ್ಗೆ,

ಉ) ವಾರ್ಷಿಕ ವಹಿವಾಟು

ಊ) ಟೆಂಡರ್ ಅರ್ಜಿದಾರರು ಸರಬರಾಜು ಮಾಡಲು ಬಯಸುವ ಸಾಮಗ್ರಿಗಳ ಪಟ್ಟಿ, ಪಟ್ಟಿಯಲ್ಲಿ ಬೆಲೆಯನ್ನು ನಮೂದಿಸಬಾರದು.

ಋ) ಅನುಭವ ಮತ್ತು ಹಿಂದೆ ಸರಬರಾಜು ಮಾಡಿರುವ ಬಗ್ಗೆ.

5. **ಎರಡನೇ ಕವರ್**: ಮೊಹರು ಮಾಡಿದ ಎರಡನೇ ಕವರ್ ಟೆಂಡರ್ ಅರ್ಜಿ ಮತ್ತು ಸರಬರಾಜು ಮಾಡುವ ಸಾಮಗ್ರಿಯ ಹೆಸರು ಮತ್ತು ಬೆಲೆ ಪಟ್ಟಿಯನ್ನು ಮಾತ್ರ ಹೊಂದಿರಬೇಕು. (ಪ್ರತಿ ಐಟಂಗೆ ಪ್ರತ್ಯೇಕವಾಗಿ ಬೆಲೆ ನಮೂದಿಸುವುದು)

6. ಮೊಹರು ಮಾಡಿದ ಎರಡು ಕವರ್‌ಗಳನ್ನು ಮೇಲೆ ತಿಳಿಸಿದ ರೀತಿಯಲ್ಲಿ ಶ್ರೀ ವಿ.ಗೋವಿಂದಯ್ಯ, ಸೂಪರಿಂಟೆಂಡೆಂಟ್ ಆಫ್ ಪೊಲೀಸ್, ವೈರ್‌ಲೆಸ್, ನಂ.1 ಕಾರ್ನ್‌ರ್ ಹೌಸ್, ಎಂ.ಜಿ. ರಸ್ತೆ, ಬೆಂಗಳೂರು – 560 001. ರವರ ಹೆಸರಿಗೆ ದಿನಾಂಕ 25.01.2007ರ ಸಂಜೆ 5.00 ಗಂಟೆ ಒಳಗೆ ತಲುಪುವಂತೆ ಸಲ್ಲಿಸತಕ್ಕದ್ದು ತದನಂತರ ಸಲ್ಲಿಸಲಾದ/ ಪಡೆದ ಅರ್ಜಿಗಳನ್ನು ಪರಿಗಣಿಸುವುದಿಲ್ಲ.

7. ಟೆಂಡರ್ ಅಹ್ವಾನಿಸಿದ ಅಧಿಕಾರಿಯು ದಿನಾಂಕ 27.01.2007ರಂದು ಬೆಳಗ್ಗೆ 1100 ಗಂಟೆಗೆ ಮೊದಲನೆ ಕವರನ್ನು ತೆರೆದು ಸರಬರಾಜು ಸಂಸ್ಥೆಗಳು ಸಲ್ಲಿಸಲಾದ ಮಾಹಿತಿಗಳನ್ನು / ದಾಖಲಾತಿಗಳನ್ನು ಪರಿಶೀಲಿಸಿ, ಸರಬರಾಜು ಮಾಡುವ ಅರ್ಹ ಸಂಸ್ಥೆಗಳ ಪಟ್ಟಿಯನ್ನು ತಯಾರಿಸಲಾಗುವುದು ಇಚ್ಛೆಯುಳ್ಳ ಟೆಂಡರ್‌ದಾರರು/ ಪ್ರತಿನಿಧಿಗಳು, ಟೆಂಡರ್ ತೆರೆಯುವ ಕಾರ್ಯಕ್ರಮದಲ್ಲಿ ಭಾಗವಹಿಸಲು ಅವಕಾಶವಿರುತ್ತದೆ.

8. ಪ್ರತಿ ಸಾಮಗ್ರಿಗಳಿಗೆ ಪ್ರತ್ಯೇಕವಾದ ಇ.ಎಂ.ಡಿಯನ್ನು ಡಿ.ಡಿ. ಮೂಲಕ ಪಾವತಿಸದಿದ್ದರೆ ಅಂತಹ ಅರ್ಜಿಗಳನ್ನು ತಿರಸ್ಕರಿಸಲಾಗುವುದು. ಟೆಂಡರ್‌ದಾರರು ಅಂಚೆ ಮೂಲಕ/ ಕೋರಿಯರ್ ಮೂಲಕ ಕಳುಹಿಸುವ ಟೆಂಡರ್ ಅರ್ಜಿಗಳು ಮತ್ತು ದಾಖಲಾತಿಗಳು ವಿಳಂಬವಾಗಿ ತಲುಪಿದ್ದಲ್ಲಿ/ ನಾಶವಾದಲ್ಲಿ ಇಲಾಖೆಯು ಜವಾಬ್ದಾರಿಯಲ್ಲ. ಇಲಾಖೆಯು ಯಾವುದೇ ಕಾರಣವನ್ನು ನೀಡದೇ ಸಾರಾಸಗಟಾಗಿ / ಭಾಗಶ: ಒಪ್ಪಿಕೊಳ್ಳುವ ಅಥವಾ ತಿರಸ್ಕರಿಸುವ ಹಕ್ಕನ್ನು ಕಾಯ್ದಿರಿಸಿದೆ.

ಅಡಿಷನಲ್ ಡೈರೆಕ್ಟರ್ ಜನರಲ್ ಆಫ್ ಪೊಲೀಸ್,
ಟೆಲಿಕಮ್ಯೂನಿಕೇಶನ್, ಟ್ರಾನ್ಸ್‌ಪೋರ್ಟ್
ಮತ್ತು ಮಾಡರ್‌ನೈಜೇಶನ್, ಬೆಂಗಳೂರು

ಪಿ.ಆರ್. 16

## ಅರಣ್ಯ ಇಲಾಖೆ

## ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿ, ಅರಣ್ಯ ತಾಂತ್ರಿಕ ಮತ್ತು ಆಡಳಿತ ತರಬೇತಿ ಸಂಸ್ಥೆ, ITPL ಎದುರು, ವೈಟ್‌ಫೀಲ್ಡ್, ಮುಖ್ಯ ರಸ್ತೆ, ಬೆಂಗಳೂರು-48

**ಟೆಂಡರ್ ಪ್ರಕಟಣೆ ಸಂಖ್ಯೆ: ಎಫ್‌ಟಿಎಟಿಐ/ಕನಿ-1/2006-07, ದಿನಾಂಕ: 23ನೇ ಡಿಸೆಂಬರ್ 2006**

ಬೆಂಗಳೂರಿನ ನಗರ ಜಿಲ್ಲಾ ವ್ಯಾಪ್ತಿಯಲ್ಲಿ ಬರುವ ಮೇಲ್ಕಂಡ ಅಧಿಕಾರಿಗಳ ಕಚೇರಿ ಆವರಣದಲ್ಲಿ ಶೆಡ್ಯೂಲ್‌ನಲ್ಲಿ ತೋರಿಸಿರುವ ಕಾಮಗಾರಿಗಳಿಗಾಗಿ ಅರಣ್ಯ ಇಲಾಖೆಯಲ್ಲಿ 2006-07ನೇ ಸಾಲಿನಲ್ಲಿ ಗುತ್ತಿಗೆದಾರರಾಗಿ ನೊಂದಾಯಿಸಲ್ಪಟ್ಟ ಅರಣ್ಯ ಗುತ್ತಿಗೆದಾರರಿಂದ ಕಾಮಗಾರಿಗಳನ್ನು ಕಾರ್ಯಗತಗೊಳಿಸಲು ಕರ್ನಾಟಕ ಲೋಕೋಪಯೋಗಿ ಇಲಾಖೆ ಬೆಂಗಳೂರು ವೃತ್ತದ 2006-07ನೇ ಸಾಲಿನ ಮಂಜೂರಾದ ದರದ ಮೇಲೆ ಶೇಕಡಾವಾರು ದರಗಳಲ್ಲಿ, ನಮೂದಾದ ಫಾರಂನಲ್ಲಿ ಮೊಹರಾದ ಟೆಂಡರ್‌ಗಳನ್ನು ದ್ವಿಪ್ರತಿಗಳಲ್ಲಿ ಪ್ರತಿ ಕೆಲಸಕ್ಕೆ ಪ್ರತ್ಯೇವಾಗಿ ದಿನಾಂಕ: 29.01.2007 ರಂದು 4-00pm ವರೆಗೆ ಆಹ್ವಾನಿಸಲಾಗಿದೆ. ಒಂದು ವೇಳೆ ದಿನಾಂಕ: 29.1.2007 ರಂದು ಯಾವುದೇ ಟೆಂಡರ್ ಬಾರದೇ ಇದ್ದಲ್ಲಿ ಇದನ್ನೇ ಮರು ಟೆಂಡರ್ ಪ್ರಕಟಣೆ ಎಂದು ತಿಳಿದು 3.2.2007 ದಿನಾಂಕದಂದು 4-00pm ವರೆಗೆ ಟೆಂಡರ್ ಸಲ್ಲಿಸಬಹುದಾಗಿರುತ್ತದೆ. ಮೇಲ್ಕಂಡ ದಿನಾಂಕಗಳಂದು ಸರ್ಕಾರಿ ರಜೆಯಾಗಿದ್ದ ಪಕ್ಷದಲ್ಲಿ ಆದರ ನಂತರದ ಕೆಲಸದ ದಿನಗಳಂದು ಟೆಂಡರ್ ನೀಡಬಹುದಾಗಿರುತ್ತದೆ. ಟೆಂಡರ್ ಫಾರಂಗೆ ಅರ್ಜಿ ಸಲ್ಲಿಸುವಾಗ ಅರ್ಜಿದಾರರು ಟೆಂಡರ್ ಶುಲ್ಕ ಮತ್ತು ಟೆಂಡರ್ ನಿಬಂಧನೆಗಳಲ್ಲಿ ಕಾಣಿಸಿರುವ ಅರ್ಹತೆಯ ಬಗ್ಗೆ ಅಗತ್ಯ ದಾಖಲಾತಿಗಳನ್ನು ಸಲ್ಲಿಸತಕ್ಕದ್ದು ಟೆಂಡರ್ ಶುಲ್ಕವನ್ನು ಯಾವುದೇ ಕಾರಣಕ್ಕೆ ಹಿಂದಿರುಗಿಸುವುದಿಲ್ಲ.

1. ಖಾಲಿ ಟೆಂಡರ್ ಫಾರಂಗಾಗಿ ಅರ್ಜಿ ಸಲ್ಲಿಸುವ ದಿನಾಂಕ: 18, 19, 20.01.2007 ಮಧ್ಯಾಹ್ನ 4-00pm ವರೆಗೆ
2. ಅರ್ಜಿ ಸಲ್ಲಿಸಿರುವ ಅರ್ಹ ಗುತ್ತಿಗೆದಾರರಿಗೆ ಖಾಲಿ ಟೆಂಡರ್ ಫಾರಂಗಳನ್ನು ವಿತರಿಸುವ ದಿನಾಂಕ:22,23.01.2007 ರವರೆಗೆ ಕಚೇರಿ ವೇಳೆಯಲ್ಲಿ
3. ಭರ್ತಿ ಮಾಡಿದ ಮೊಹರಾದ ಟೆಂಡರ್ ಫಾರಂಗಳನ್ನು (ದ್ವಿಪ್ರತಿಯಲ್ಲಿ) ಸ್ವೀರಿಸುವ ದಿನಾಂಕ:29.1.2007ರ 4-00pm ವರೆಗೆ
4. ಟೆಂಡರ್ ತೆರೆಯುವ ದಿನಾಂಕ: 29.1.007ರ 4-30pm ಗಂಟೆಗೆ

**ಶೆಡ್ಯೂಲ್**

| ಕ್ರ. ಸಂ. | ಕೆಲಸ ಮಾಡಬೇಕಾದ ಸ್ಥಳದ ವಿವರ | ಕಾಮಗಾರಿಗಳ ವಿವರ | ಅಂದಾಜು ವೆಚ್ಚ ರೂ. ಲಕ್ಷಗಳಲ್ಲಿ | ನೀಡಬೇಕಾದ ಇ.ಎಂ.ಡಿ. ಲಕ್ಷಗಳಲ್ಲಿ | ಕಾಮಗಾರಿಗಳನ್ನು ಪೂರ್ಣಗೊಳಿಸಬೇಕಾದ ಸಮಯ | ಷರಾ |
|---|---|---|---|---|---|---|
| 1. | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ತಾಂತ್ರಿಕ ಮತ್ತು ಆಡಳಿತ ತರಬೇತಿ ಸಂಸ್ಥೆ, ಆವರಣ, ITPL ಎದುರು, ವೈಟ್‌ಫೀಲ್ಡ್ ಮುಖ್ಯ ರಸ್ತೆ, ಬೆಂಗಳೂರು-48 | ರಸ್ತೆ ನಿರ್ಮಾಣ ಕಾಮಗಾರಿ (ಮೆಟಲಿಂಗ್ & ಡಾಂಬರೀಕರಣ) | 18.100 | 0.450 | ಕರಾರು ಮಾಡಿಕೊಂಡ ದಿನಾಂಕದಿಂದ 1 ತಿಂಗಳು | ಮೆಟಲಿಂಗ್ ಮತ್ತು ಡಾಂಬರೀಕರಣ |
| 2. | | ಕಾಂಪೌಂಡ್ ಗೋಡೆ ನಿರ್ಮಾಣ ಮಾಡುವ ಕಾಮಗಾರಿ | 06.830 | 0.170 | ಕರಾರು ಮಾಡಿಕೊಂಡ ದಿನಾಂಕದಿಂದ 2 ತಿಂಗಳು | ಕಲ್ಲುಗೋಡೆ ಮತ್ತು ಮುಳ್ಳು ತಂತಿ ಹಾಕಿ ಕಟ್ಟುವುದು. |
| 3. | | ಮಲ್ಟಿಪರ್ಪಸ್ ಹಾಲ್ ನಿರ್ಮಾಣ ಮಾಡುವುದು (ಮೇಲ್ಚಾವಣಿಗೆ GRP ಶೀಟ್ ಅಳವಡಿಸುವುದು) | 06.000 | 0.150 | ಕರಾರು ಮಾಡಿಕೊಂಡ ದಿನಾಂಕದಿಂದ 2 ತಿಂಗಳು | ಮೇಲ್ಚಾವಣಿಗೆ ಜಿ.ಆರ್.ಪಿ. ಶೀಟ್ ಅಳವಡಿಸಿ ಕಟ್ಟಡದ ನಿರ್ಮಾಣ ಮಾಡುವುದು. |

ವಿವರವಾದ ಟೆಂಡರ್ ಷರತ್ತುಗಳ ವಿವರವನ್ನು ಈ ಕಚೇರಿಯಿಂದ ಕೆಲಸದ ವೇಳೆಯಲ್ಲಿ ಪಡೆಯಬಹುದಾಗಿದೆ.

ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಅರಣ್ಯ ತಾಂತ್ರಿಕ ಮತ್ತು ಆಡಳಿತ ತರಬೇತಿ ಸಂಸ್ಥೆ, ಬೆಂಗಳೂರು-48

ನಿಭಂದನೆಗಳುಃ

1. ಟೆಂಡರುದಾರರು ೨೦೦೬-೦೭ ನೇ ಸಾಲಿನಲ್ಲಿ ನೊಂದಾಯಿಸಲ್ಪಟ್ಟ ಅರಣ್ಯ ಗುತ್ತಿಗೆದಾರರಾಗಿರಬೇಕು.
2. ಟೆಂಡರು ಫಾರಂಗಳಿಗೆ ಅಂದಾಜು ವೆಚ್ಚದ ಶೇ. 2.5% ಅಥವಾ ಶೆಡ್ಯೂಲ್‌ನಲ್ಲಿ ಕಾಣಿಸಿರುವ ಇ.ಎಂ.ಡಿ. ಯನ್ನು ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕಿನಿಂದ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ತಾಂತ್ರಿಕ ಮತ್ತು ಆಡಳಿತ

ತರಭೇತಿ ಸಂಸ್ಥೆ, ಕಾಡುಗೋಡಿ, ಬೆಂಗಳೂರು-೪೮ ಇವರ ಹೆಸರಿನಲ್ಲಿ ಡಿ. ಡಿ. ಪಡೆದು ಟೆಂಡರ್ ಫಾರಂ ಜೊತೆ ಲಗತ್ತಿಸಬೇಕು.

3. ಟೆಂಡರ್ ಫಾರಂಗಳನ್ನು ಸೀಲು ಮಾಡಿದ ಲಕೋಟೆಯಲ್ಲಿಟ್ಟು ಲಕೋಟೆಯ ಮೇಲೆ "ಅರಣ್ಯ ತಾಂತ್ರಿಕ ಮತ್ತು ಆಡಳಿತ ತರಭೇತಿ ಸಂಸ್ಥೆ, ಕಾಡುಗೋಡಿ, ಬೆಂಗಳೂರು ಇಲ್ಲಿನ ಸಿವಿಲ್ ಕಾಮಗಾರಿಗಳ ಬಗ್ಗೆ " ಎಂದು ನಮೂದಿಸತಕ್ಕದ್ದು.
4. ಟೆಂಡರ್ ಫಾರಂಗಳನ್ನು ಈ ಕಛೇರಿಯಿಂದ ಇದೇ ಸಂಖ್ಯೆಯ ದಿನಾಂಕದ ಸಂಕ್ಷಿಪ್ತ ಟೆಂಡರು ಪ್ರಕಟಣೆಯಲ್ಲಿ ತಿಳಿಸಿರುವಂತೆ ಆಯಾಯಾ ದಿನಾಂಕಗಳಂದು ಕಛೇರಿ ವೇಳೆಯಲ್ಲಿ ಕೊಡಲಾಗುವುದು ಟೆಂಡರ್ ಫಾರಂ ಬೆಲೆ ರೂ 500-00. (ತೆರಿಗೆಗಳು ಪ್ರತ್ಯೇಕ)
5. ಕೆಲಸಗಳನ್ನು ಈ ಕಛೇರಿಯಿಂದ ನೀಡಲಾಗುವ ಡ್ರಾಯಿಂಗ್ ಹಾಗೂ ಇತರೆ ವಿತರಣೆ ಮಾದರಿ ರೀತ್ಯವೇ ಮಾಡಬೇಕು ಹಾಗೂ ಅಂದಾಜು ಪಟ್ಟಿಗಳನ್ನು ಲೋಕೋಪಯೋಗಿ ಇಲಾಖೆಯ 2006-07 ನೇ ಸಾಲಿನ ಮಂಜೂರಾದ ದರಪಟ್ಟಿಯ ಆದಾರದ ಮೇಲೆ ತಯಾರು ಮಾಡಲಾಗಿದೆ. ಇದರ ಮೇಲೆ ಟೆಂಡರ್‌ನಲ್ಲಿ ಶೇಕಡಾವಾರು ಕಡಿಮೆ ಅಥವಾ ಹೆಚ್ಚು ದರ ನಮೂದಿಸುವುದು.
6. ದಿನಾಂಕಃ 29-01-2007 ರಂದು 4-00 pm ಗಂಟೆಯವರೆಗೆ ಟೆಂಡರನ್ನು ಈ ಕಛೇರಿಯಲ್ಲಿ ಅದಕ್ಕೆಂದೆ ಇಟ್ಟಿರುವ ಟೆಂಡರ್ ಡಬ್ಬದಲ್ಲಿ ಹಾಕಬೇಕು.
7. ದಿನಾಂಕಃ 29-01-2007 ರಂದು 4-00pm ಗಂಟೆಗೆ ಹಾಜರಿರುವ ಟೆಂಡರುದಾರರ ಸಮ್ಮುಖದಲ್ಲಿ ಟೆಂಡರ್‌ಗಳನ್ನು ತೆಗೆಯಲಾಗುವುದು.
8. ಟೆಂಡರ್‌ಗಳನ್ನು ಒಪ್ಪಿಕೊಳ್ಳುವ ಅಥವಾ ತಿರಸ್ಕರಿಸುವ ಅಧಿಕಾರ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ತಾಂತ್ರಿಕ ಮತ್ತು ಆಡಳಿತ ತರಭೇತಿ ಸಂಸ್ಥೆ, ಕಾಡುಗೋಡಿ, ಬೆಂಗಳೂರು-48 ರವರಿಗಿರುತ್ತದೆ. ತಿರಸ್ಕೃತ ಟೆಂಡರ್‌ಗಳಿಗೆ ಕಾರಣ ನೀಡಲಾಗುವುದಿಲ್ಲ.
9. ಪಿಡಬ್ಲೂಡಿ ದರಗಳಿಲ್ಲದ ಕೆಲಸ / ವಸ್ತುಗಳಿಗೆ ಡಾಟಾ ಶೀಟ್ ತಯಾರಿಸಿ ಪಿ.ಡಬ್ಲೂ.ಡಿ ಅಧೀಕ್ಷಕ ಅಭಿಯಂತರರಿಂದ ಅಂಗೀಕರಿಸಲ್ಪಟ್ಟ ದರವನ್ನು ಅಳವಡಿಸಿ ಅಂದಾಜು ಪಟ್ಟಿ ತಯಾರಿಸಲಾಗುವುದು.
10. ಯಶಸ್ವಿ ಟೆಂಡರ್‌ದಾರರು ಕೆಲಸದ ಸಂದೇಶ ಕೊಟ್ಟ 3 ದಿನಗಳೊಳಗೆ ಈ ಕಛೇರಿಯಲ್ಲಿ ರೂ.100-00 ಛಾಪಾ ಕಾಗದದ ಮೇಲೆ ಕರಾರು ಮಾಡಿಕೊಟ್ಟು ಕೆಲಸದ ಆದೇಶ ಪಡೆಯುವುದು.
11. ಗುತ್ತಿಗೆದಾರರು ಮಾಡಬಹುದಾದ ಯಾವ ಷರತ್ತುಗಳನ್ನು ಅಂಗೀಕರಿಸುವುದಿಲ್ಲ.
12. ಯಶಸ್ವಿ ಟೆಂಡರುದಾರರಿಂದ ಇಎಂಡಿ ಜೊತೆಯಲ್ಲಿ ಶೇಕಡಾ 5 ರಷ್ಟನ್ನು ಅವರ ಬಿಲ್ಲುಗಳಲ್ಲಿ ಭದ್ರಾತಾ ಠೇವಣಿಯಾಗಿ ಹಿಡಿಯಲಾಗುವುದು. ಈ ಹಣವನ್ನು ಅವರಿಗೆ ಒಪ್ಪಿಸಿದ ಕೆಲಸವನ್ನು ತೃಪ್ತಿಕರವಾಗಿ ಪೂರೈಸಿದ ನಂತರ ಹಾಗೂ ಅಂತಿಮ ಬಿಲ್ ಪಾವತಿಯಾದ 6 ತಿಂಗಳ ನಂತರ ಚೆಕ್ ಮೂಲಕ ಹಿಂತಿರುಗಿಸಲಾಗುವುದು.
13. ಪ್ರತಿ ಬಿಲ್‌ನಲ್ಲಿ ಶೇ. 2 ರಷ್ಟನ್ನು ಆದಾಯ ಮತ್ತು 8 ರಷ್ಟುನ್ನು ಮಾರಾಟ ತೆರಿಗೆಯಾಗಿ ಮತ್ತು ಆಗಿಂದಾಗ್ಗೆ ಬದಲಾಗುವ ಸರ್ಕಾರಿ ಆದೇಶದಂತೆ ಅನ್ವಯವಾಗುವಂತೆ ಎಲ್ಲಾ ತೆರಿಗೆಗಳನ್ನು ಕಟಾವು ಮಾಡಲಾಗುವುದು.
14. ಈ ಗುತ್ತಿಗೆಯ ಬಗ್ಗೆ ಯಾವುದಾದರೂ ತಂಟೆ ತಕರಾರು ಬಂದರೆ ಅರಣ್ಯ ಸಂರಕ್ಷಣಾಧಿಕಾರಿಗಳು, ತರಬೇತಿ ಮತ್ತು ನಿಸರ್ಗ ಪ್ರವಾಸೋದ್ಯಮ, ಧಾರವಾಡ ಇವರ ನಿರ್ಧಾರವೇ ಅಂತಿಮ ನಿರ್ಧಾರವಾಗಿರುತ್ತದೆ.
15. ಕೆಲಸದ ಆದೇಶ ನೀಡಿದ ದಿನಾಂಕದಿಂದ ಟೆಂಡರ್ ಪ್ರಕಟಣೆಯ ಶೆಡ್ಯೂಲ್‌ನಲ್ಲಿ ಕಾಣಿಸಿರುವ ಅವಧಿಯಲ್ಲಿ ಕೆಲಸವನ್ನು ಪೂರೈಸತಕ್ಕದ್ದು.
16. ಇತರೆ ಇಲಾಖೆಗಳಿಂದ ಅಂದರೆ K P T C L, ಒಳಚರಂಡಿ, ನಗರಪಾಲಿಕೆ ಇಲಾಖೆಯಿಂದ ಕಟ್ಟಡದ ಕಾರ್ಯದ ಸಲುವಾಗಿ ಬೇಕಾದ ಅನುಮತಿ ನೀವೆ ಪಡೆಯಬೇಕು.
17. ಟೆಂಡರುದಾರರ ವತಿಯಿಂದ ನೇಮಿಸತಕ್ಕ ಕೆಲಸಗಾರರ ವಿವರಗಳನ್ನು ಈ ಕಛೇರಿಗೆ ನೀಡತಕ್ಕದ್ದು ಮತ್ತು ಕಟ್ಟಡದ ಕೆಲಸದ ಅವಧಿಯಲ್ಲಿ ಯಾವುದೇ ವಿಧವಾದ ಜೀವ ಮತ್ತು ಆಸ್ತಿ ನಷ್ಟ ಸಂಭಂವಿಸಿದ್ದಲ್ಲಿ ನೀವೇ ಹೊಣೆಗಾರರಾಗಿರುತ್ತೀರಿ.
18. ಕೆಲಸವನ್ನು ತೃಪ್ತಿಕರವಾಗಿ ಪೂರೈಸಿದೆ ಎಂದು ಉಪ ಅರಣ್ಯ ಸಂರಕ್ಷಣಾಧಿಕಾರಿ/ ವಲಯ ಅರಣ್ಯಾಧಿಕಾರಿಗಳು ಪರಿಶೀಲಿಸಿ ಪ್ರಮಾಣಿಕರಿಸಿದ ನಂತರ ಬಿಲ್ಲು ಪಾವತಿಸಲಾಗುವುದು.
19. ಟೆಂಡರುದಾರರು 18 ವರ್ಷಕ್ಕಿಂತ ಕಡಿಮೆ ವಯಸ್ಸಿನ ವ್ಯಕ್ತಿಗಳನ್ನು ಕೆಲಸಕ್ಕೆ ನಿಯೋಜಿಸಬಾರದು.
20. ಉಪ ಅರಣ್ಯ ಸಂರಕ್ಷಣಾಧಿಕಾರಿ ಅಥವಾ ಅವರಿಂದ ನಿಯೋಜಿಸಲ್ಪಟ್ಟ ಅಧಿಕಾರಿ ಅಥವಾ ಪ್ರತಿನಿಧಿ ಸದರಿ ಕೆಲಸವನ್ನು ನೋಡಬಯಸಿದ್ದಲ್ಲಿ ಅದಕ್ಕೆ ಅನುವು ಮಾಡಿಕೊಡಬೇಕು.
21. ಸಾರ್ವತ್ರಿಕ ರಜೆ ದಿನಗಳಲ್ಲಿ ಕೆಲಸ ಮಾಡಬೇಕಾದರೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಅನುಮತಿಯನ್ನು ಬರವಣಿಗೆಯಲ್ಲಿ ಪಡೆಯತಕ್ಕದ್ದು.
22. ಟೆಂಡರುದಾರರು ನಿರ್ವಹಿಸಿದ ಕೆಲಸಗಳ ಪೈಕಿ ಕಟ್ಟಡದ ಯಾವುದೇ ಕೆಲಸ ಉಪ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ತೃಪ್ತಿಕರವಾಗದೇ ಇದ್ದಲ್ಲಿ ಆ ಕೆಲಸಕ್ಕೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ತೀರ್ಮಾನದಂತೆ ಹಣ ಪಾವತಿ ಮಾಡಲಾಗುವುದು.
23. ಕೆಲಸಗಳು ಮುಗಿದ ನಂತರ ಅದರ ಅಳತೆಯನ್ನು ಲೋಕೋಪಯೋಗಿ ಇಲಾಖೆಯವರು ನಿಗಧಿಪಡಿಸಿರುವ ನೂತನ ಪದ್ದತಿಯ ರೀತ್ಯಾ ಮಾಡಲಾಗುವುದು.
24. ಕೆಲಸದ ಆದೇಶ ನೀಡಿದ ದಿನದಿಂದ ಕರಾರು ಪತ್ರದಲ್ಲಿ ನಿಗಧಿಪಡಿಸಿದ ಅವಧಿಯೊಳಗೆ ಕೆಲಸವನ್ನು ಮುಗಿಸದೆ ಇದ್ದ ಪಕ್ಷದಲ್ಲಿ ಅಂದಾಜು ವೆಚ್ಚದ ಶೇ.1 ರಷ್ಟನ್ನು ಅಥವಾ ಅರಣ್ಯ ಸಂರಕ್ಷಣಾಧಿಕಾರಿಗಳು/ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ನಿಗಧಿಪಡಿಸಿದ ಮೊತ್ತವನ್ನು ದಂಡವಾಗಿ ಕಟ್ಟಬೇಕಾಗುತ್ತದೆ.
25. ಈ ಕೆಲಸವನ್ನು ಕೈಗೊಳ್ಳುವಾಗ ಟೆಂಡರುದಾರರಿಂದ ಇಲಾಖೆಗೆ ಯಾವುದಾದರೂ ನಷ್ಟ ಸಂಭವಿಸಿದ್ದಲ್ಲಿ ಪರಿಹಾರವಾಗಿ ಅದನ್ನು ಅವರ ಹೆಸರಿನಲ್ಲಿರುವ ಭದ್ರಾತಾ ಠೇವಣಿಯಲ್ಲಿ ಮುರಿದು ಕೊಳ್ಳಲಾಗುವುದು.

26. ಟೆಂಡರುದಾರರು ನಿಗಧಿತ ಅವಧಿಯಲ್ಲಿ ಕಾಮಗಾರಿಯನ್ನು ಪೂರೈಸದೆ ಅಪೂರ್ಣ ಸ್ಥಿತಿಯಲ್ಲಿ ಬಿಟ್ಟು ಹೋದ ಪಕ್ಷದಲ್ಲಿ ಸದರಿ ಕೆಲಸವನ್ನು ಟೆಂಡರುದಾರ ಜವಾಬುದಾರಿ ಮತ್ತು ವೆಚ್ಚದಲ್ಲಿ ಇಲಾಖಾ ವತಿಯಿಂದ ಮಾಡಿಸಲು ಉಪ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ಸಂಪೂರ್ಣ ಹಕ್ಕಿರುತ್ತದೆ. ಮತ್ತು ಈ ಸಂಬಂದದಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಕೆಲಸದ ಬಗ್ಗೆ ನೀಡಿದ ದೃಡಿಕರಣ ಪತ್ರವೆ ಅಂತಿಮವಾಗಿರುತ್ತದೆ.
27. ಬಿಲ್ಲುಗಳನ್ನು ಪಾವತಿಗೆ ಸಲ್ಲಿಸುವಾಗ ನಿಗಧಿತ ನಮೂನೆಯಲ್ಲಿ ಸಲ್ಲಿಸತಕ್ಕದ್ದು.
28. ಟೆಂಡರುದಾರರಿಗೆ ನೀಡಲಾದ ಮಾದರಿ ಮತ್ತು ವಿವರಣೆಯಲ್ಲಿ ಬದಲಾವಣೆಗಳನ್ನು ಮಾಡಲು ಉಪ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ಅಧಿಕಾರವಿರುತ್ತದೆ. ಈ ಬದಲಾವಣೆಗಳಿಂದ ಕರಾರು ಒಪ್ಪಂದ ಅನೂರ್ಜಿತಗೊಳ್ಳುವುದಿಲ್ಲ.
29. ಕೆಲಸದಲ್ಲಿ ಏನಾದರೂ ಬದಲಾವಣೆ / ಮಿತಿಗೊಳಿಸಿದ್ದಲ್ಲಿ ಟೆಂಡರುದಾರರು ಕ್ಲೈಂ ಮಾಡಬಹುದಾದ ಯಾವುದೇ ರೀತಿಯ ಪರಿಹಾರಗಳ್ನು ನೀಡಲು ಇಲಾಖೆ ಬದ್ದವಾಗಿರುವುದಿಲ್ಲ.
30. ಕೆಲಸದ ಅವಧಿಯ ವಿಸ್ತರಣೆ ಬಗ್ಗೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ನೀಡಿದ ಆದೇಶವೆ ಅಂತಿಮವಾಗಿದ್ದು ಇದನ್ನು ಎಲ್ಲಾ ಟೆಂಡರುದಾರರು ಒಪ್ಪಿಕೊಳ್ಳಲು ಬದ್ದವಾಗಿರಬೇಕು.
31. ಟೆಂಡರುದಾರರು ನಿರ್ವಹಿಸಿದ ಕೆಲಸದ ಗುಣಮಟ್ಟ ಕಳಪೆಯಾಗಿದ್ದಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ನಿಗಧಿ ಪಡಿಸಿದ ದಂಡವನ್ನು ಕಟ್ಟಬೇಕು ಹಾಗೂ ಸದರಿ ಕೆಲಸವನ್ನು ಟೆಂಡರುದಾರರ ವೆಚ್ಚದಲ್ಲಿ ಸರಿಪಡಿಸಬೇಕು.
32. ಉಪ ಅರಣ್ಯ ಸಂರಕ್ಷಣಾಧಕಾರಿಗಳ ಪೂರ್ವಾನುಮತಿ ಇಲ್ಲದೆ ಬೇರೆಯವರಿಗೆ ಕಾಮಗಾರಿಯನ್ನು ವಹಿಸಿಕೊಟ್ಟಲ್ಲಿ ಕೆಲಸದ ಆದೇಶವನ್ನು ರದ್ದುಪಡಿಸುವುದಲ್ಲದೇ ಇಎಂಡಿ ಮತ್ತು ಎಸ್‌ಡಿ ಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
33. ಕೆಲಸದ ಅವಧಿಯಲ್ಲಿ ಗುತ್ತಿಗೆದಾರರು ನೇಮಿಸಿಕೊಂಡ ನೌಕರರಿಗೆ ಏನಾದರೂ ಪೆಟ್ಟು ಬಿದ್ದಲ್ಲಿ ಅಥವಾ ಆಕಸ್ಮಿಕ ಸಂಬಂವಿಸಿದಲ್ಲಿ ಅದರ ಚಿಕಿತ್ಸಾ ವೆಚ್ಚವನ್ನು ಟೆಂಡರುದಾರರೆ ಭರಿಸಬೇಕು. ಒಂದು ವೇಳೆ ಈ ವೆಚ್ಚವನ್ನು ಇಲಾಖೆ ಭರಿಸಿದ್ದಲ್ಲಿ ಟೆಂಡರುದಾರರಿಗೆ ನೀಡಬೇಕಾದ ಬಿಲ್ಲಿನ ಹಣದಲ್ಲಿ ಸದರಿ ಮೊತ್ತವನ್ನು ಮುರಿದುಕೊಳ್ಳಲಾಗುವುದು.
34. ಕೆಲಸದ ಪ್ರದೇಶದಲ್ಲಿ ಕೆಲಸ ನಿರ್ವಹಿಸುವ ಕೆಲಸಗಾರರ ಸುರಕ್ಷತೆಗೆ ಎಲ್ಲಾ ಕ್ರಮಗಳನ್ನು ಟೆಂಡರುದಾರರೇ ತೆಗೆದುಕೊಳ್ಳುವುದು.
35. ಕೆಲಸ ಪ್ರಾರಂಭಿಸುವಲ್ಲಿ ಇಲಾಖಾ ವತಿಯಿಂದ ಯಾವುದೇ ವಿಳಂಭವಾದಲ್ಲಿ ಟೆಂಡರುದಾರರಿಗೆ ಈ ಸಂಬಂಧ ಯಾವುದೇ ಪರಿಹಾರ ನೀಡಲಾಗುವುದಿಲ್ಲ.
36. ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಲಿಖಿತ ಅನುಮತಿ ಇಲ್ಲದೇ ಯಾವುದೇ ಕೆಲಸವನ್ನು ಟೆಂಡರುದಾರರು ಪ್ರಾರಂಭಿಸಬಾರದು.
37. ಬಿಲ್ಲಿನ ಹಣವನ್ನು ಯಶಸ್ವಿ ಟೆಂಡರುದಾರರಿಗೆ ಪೂರ್ಣಗೊಂಡ ಕೆಲಸಕ್ಕೆ ಕ್ರಾಸ್ಡ್ ಚೆಕ್ ಮೂಲಕವೇ ನೀಡಲಾಗುವುದು.
38. ಟೆಂಡರುದಾರರು ನಮೂದಿಸಿರುವ ದರವು ನಿಯಾಮಾಳಿಗಳ ಪ್ರಕಾರ ಮಾರಾಟ ತೆರಿಗೆ, ಇತರೆ ತೆರಿಗೆಗಳ ದರವನ್ನು ಒಳಗೊಂಡಿರಬೇಕು. ಈ ಬಗ್ಗೆ ಗುತ್ತಿಗೆದಾರರಿಗೆ ಯಾವುದೇ ಹೆಚ್ಚುವರಿ ಹಣ ನೀಡಲಾಗುವುದಿಲ್ಲ.
39. ಮೇಲೆ ಹೇಳಿದ ಟೆಂಡರು ನಿಯಮಗಳಿಗೆ ಒಪ್ಪದೆ ಇದ್ದ ಟೆಂಡರುದಾರರ ಟೆಂಡರನ್ನು ತಿರಸ್ಕರಿಸಲಾಗುವುದು.
40. ಯಶಸ್ವಿ ಟೆಂಡರುದಾರರು ನಮೂದಿಸಿರುವ ದರದಲ್ಲಿ ಯಾವುದೇ ಕಾರಣದಿಂದ ಅಂದರೆ ಕಾಲ ಹೆಚ್ಚಳ, ಹೊಸದರಪಟ್ಟಿಯ ಪ್ರಕಟಣೆ ಮುಂತಾದ್ದು ಅಥವಾ ಇನ್ನಾವುದೇ ಕಾರಣದಿಂದ (ಅವಧಿ ವಿಸ್ತರಣೆಯಿಂದಲೂ) ನಮೂದಿಸಿದ ದರಕ್ಕಿಂತ ಹೆಚ್ಚು ಮಾಡಲಾಗುವುದಿಲ್ಲ.
41. ಕಾರಣಾಂತರಗಳಿಂದ ಯಾವುದೇ ಕೆಲಸವನ್ನು ಪೂರ್ಣವಾಗಿ ನಿಲ್ಲಿಸಬೇಕಾದಲ್ಲಿ ಅಂತಹ ಗುತ್ತಿಗೆದಾರರಿಗೆ ಇಎಂಡಿ ಹಣವನ್ನು ಮಾತ್ರ ಹಿಂದಿರುಗಿಸಲಾಗುತ್ತದೆ. ಮತ್ತು ಈ ಬಗ್ಗೆ ಯಾವುದೇ ರೀತಿ ಪರಿಹಾರ ನೀಡಲಾಗುವುದಿಲ್ಲ.
42. ನಮೂದಿಸಿರುವ ದರವು ಕೆಲಸದ ಸ್ಥಳದ ಸ್ವಚ್ಚ, ಮಾಡಿರುವಿಕೆ ಒಳಗೊಂಡಿರಬೇಕು ಮತ್ತು ಈ ದರದಲ್ಲಿ ಎಲ್ಲಾ ಋತುಮಾನ ಭೂಮಿಯ ಪರಿಸ್ಥಿತಿಗಳಲ್ಲೂ ಕೆಲಸ ಮಾಡಬೇಕು.
43. ಪಿಡಬ್ಲೂಡಿ ದರಪಟ್ಟಿಯಲ್ಲಿ ನಮೂದಿಸಿರುವಂತೆ ಉತ್ತಮ ಗುಣಮಟ್ಟದ ಸಾಮಗ್ರಿಗಳನ್ನು ಮಾತ್ರ ಕಟ್ಟಡದ ಕೆಲಸಕ್ಕೆ ಉಪಯೋಗಿಸಬೇಕು.
44. ನಮೂದಿಸಿದ ದರಗಳಲ್ಲಿ ಸಾಮಾಗ್ರಿಗಳ ಬೆಲೆ ಮತ್ತು ಸಾಗಾಣಿಕೆ ವೆಚ್ಚ ಸೇರಿರುತ್ತದೆ ಎಂದು ತಿಳಿಯುವುದು.
45. ಉತ್ತಮ ಗುಣಮಟ್ಟದ ಸಾಮಗ್ರಿಗಳನ್ನು ಮಾತ್ರವೆ ಕೆಲಸದ ಸ್ಥಳದಲ್ಲಿ ದಾಸ್ತಾನು ಮಾಡಬೇಕು, ತಿರಸ್ಕೃತ ಸಾಮಗ್ರಿಗಳನ್ನು ಕೆಲಸದ ಪ್ರದೇಶದಿಂದ ಕೂಡಲೇ ಸಾಗಿಸಬೇಕು.
46. ಕೆಲಸದ ಸ್ಥಳದಿಂದ ಅನುಪಯೋಗಿ ವಸ್ತುಗಳನ್ನು ಗುತ್ತಿಗೆದಾರರು ತೆಗೆಯದಿದ್ದಲ್ಲಿ ಅಂದಾಜು ವೆಚ್ಚದ ಮೇಲೆ ಶೇ.2ನ್ನು ಬಿಲ್ಲುಗಳಲ್ಲಿ ಕಡಿತಗೊಳಿಸಲಾಗುವುದು.
47. ಟೆಂಡರ್ ಫಾರಂ ನೀಡುವ ದಿನಗಳಲ್ಲಿ ಗುತ್ತಿಗೆದಾರರ ನೊಂದಣಿಯನ್ನು ಮಾಡಲಾಗುವುದಿಲ್ಲ.
48. ಟೆಂಡರ್ ಫಾರಂಗಾಗಿ ಅರ್ಜಿ ಸಲ್ಲಿಸುವ ಗುತ್ತಿಗೆದಾರರು ನೋಂದಣಿ ಪ್ರತಿ, ಅನುಭವದ ಪ್ರತಿ ಹಾಗೂ ಕಾಮಗಾರಿಗಳಿಗೆ ಅಗತ್ಯವಾದ ಎಲ್ಲಾ ವಿಧವಾದ ಯಂತ್ರೋಪಕರಣಗಳನ್ನು ಸ್ವತಃ ಹೊಂದಿರುವ ಅರ್ಹತೆಯ ದಾಖಲಾತಿಗಳನ್ನು ದ್ವಿಪ್ರತಿಯಲ್ಲಿ ಟೆಂಡರ್ ಫಾರಂ ಅರ್ಜಿ ಸಲ್ಲಿಸುವ ಸಮಯದಲ್ಲಿ ದಾಸ್ತಾವೇಜುಗಳ ಶುಲ್ಕದೊಂದಿಗೆ ಸಲ್ಲಿಸುವುದು. ಅರ್ಹತಾ ಪತ್ರವನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿ ಅಥವಾ ಕಾರ್ಯನಿರ್ವಾಹಕ ಅಭಿಯಂತರ ಹುದ್ದೆಗೆ ಕಡಿಮೆ ಇರದ ಅಧಿಕಾರಯುಕ್ತ ಪ್ರಾಧಿಕಾರದಿಂದ ಪಡೆಯಬೇಕು.

ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಅರಣ್ಯ ತಾಂತ್ರಿಕ ಮತ್ತು ಆಡಳಿತ ತರಬೇತಿ ಸಂಸ್ಥೆ
ಕರ್ನಾಟಕ ಅರಣ್ಯ ಇಲಾಖೆ, ಬೆಂಗಳೂರು-48.

ಪಿ.ಆರ್. 17

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ, ಸಾಗರ ವಿಭಾಗ, ಸಾಗರ

**ಕ್ರ.ಬಿ3.ವಾಹನ.ಹರಾಜು.ಸಿಆರ್. 18/06-07, ದಿನಾಂಕ: 6ನೇ ಜನವರಿ 2007**

**ಸಂಕ್ಷಿಪ್ತ ಟೆಂಡರ್ ಕಂ ಬಹಿರಂಗ ಹರಾಜು ಪ್ರಕಟಣೆ**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ ಸಾಗರ ಅರಣ್ಯ ವಿಭಾಗದಲ್ಲಿ ಅರಣ್ಯ ಮೊಕದ್ದಮೆಗಳಲ್ಲಿ ವಶಪಡಿಸಿಕೊಂಡು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುವಂತಹ ವಾಹನಗಳನ್ನು ಎಲ್ಲಿವೆಯೋ ಅಲ್ಲಿ ಹೇಗಿವೆಯೋ ಹಾಗೇ ದಿ:27.2.2007 ರಂದು ಬೆಳಿಗ್ಗೆ 10-00 ಗಂಟೆಗೆ ಸರ್ಕಾರಿ ನಾಟಾ ಸಂಗ್ರಹಾಲಯ ಸಾಗರ ಇಲ್ಲಿರುವ ವಾಹನದ ಶೆಡ್ಡಿನ ಆವರಣದಲ್ಲಿ ಈ ಕೆಳಗೆ ಸಹಿ ಮಾಡಿರುವವರಿಂದ ಅಥವಾ ಅವರಿಂದ ಅಧಿಕಾರ ಪಡೆದ ಇತರೆ ಅಧಿಕಾರಿಗಳಿಂದ ಟೆಂಡರ್ ಕಂ ಬಹಿರಂಗ ಹರಾಜಿನ ಮೂಲಕ ಹರಾಜು ಮಾಡಲಾಗುವುದು. ಇಷ್ಟವುಳ್ಳವರು ನಿಗದಿಪಡಿಸಿದ ಇಎಂಡಿ ಹಣವನ್ನು ಮುಂಗಡವಾಗಿ ಪಾವತಿಸಿ ಇಲಾಖೆ ಷರತ್ತುಗಳಿಗೆ ಅನುಸಾರವಾಗಿ ಹರಾಜಿನಲ್ಲಿ ಭಾಗವಹಿಸುವುದು. ಟೆಂಡರ್ ಫಾರಂನ್ನು ವಲಯ ಅರಣ್ಯಾಧಿಕಾರಿಗಳು, ಸರ್ಕಾರಿ ನಾಟಾ ಸಂಗ್ರಹಾಲಯ ಸಾಗರ ಇಲ್ಲಿನ ಕಛೇರಿ ವೇಳೆಯಲ್ಲಿ ನಿಗದಿತ ಶುಲ್ಕವನ್ನು ಪಾವತಿಸಿ ಪಡೆಯಬಹುದು. ದಿ:27.2.2007 ರಂದು ಬೆಳಿಗ್ಗೆ 10-00 ರಿಂದ 1-00 ಗಂಟೆಯವರೆಗೆ ಮಾತ್ರ ಟೆಂಡರ್ ಹಾಕಬಹುದು. ದಿ:27.2.2007 ರ ಬೆಳಿಗ್ಗೆ 11-00 ಗಂಟೆಯಿಂದ 5-30ರ ವರೆಗೆ ಬಹಿರಂಗ ಹರಾಜು ಮಾಡಲಾಗುವುದು. ಸದರಿ ಟೆಂಡರ್ ಕಂ ಬಹಿರಂಗ ಹರಾಜು ಮಾಡಲಿರುವ ಸಂಖ್ಯೆ ಈ ಕೆಳಕಂಡಂತಿದೆ.

| Sl. No. | Model | Vehicle No | Chassis No | Engine No |
|---|---|---|---|---|
| 1. | Maruthi Van | MH-09-E-48 | 847909 | 535879 |
| 2. | Hero-Honda | KA-09-K-6672 | 95B10F04943 | 95B10E12257 |
| 3. | M-80-Motor Cycle | CRW-3125 | 16EBEC3745 | 16E059505 |
| 4. | Ambassador Car | CNX-8658 | Not visible | Not visible |
| 5. | Canter (Lorry) | KA-14-4176 | 4EC31026770 | 131019198 |
| 6. | M-80-Motor Cycle | KA-15-E-826 | C16CA-039304 | E16CA039402 |
| 7. | M-80- Motor Cycle | KA-31-H-3044 | 16CBDK59617 | 16EDK59624 |
| 8. | Tempo Trax | KA-15-M-553 | TX945815596 | 61696915301G |
| 9. | M-80- Motor Cycle | MEP-8346 | 15C0770590 | NOT VISIBLE |
| 10. | Yamaha Byke | KA-23-R-6729 | 0336-035-5KA 302435 | 5KA-302435 |
| 11. | M-80- Motor Cycle | KA-18-E-3038 | E16DG-15-5344 | G16DG-15-5272 |
| 12. | Suzuki Byke | KA-15-E-8705 | NOT VISIBLE | 18641NOS1465 |
| 13. | M-80- Motor Cycle | KA-31-E-439 | 060-93G-413642 | 16E93G-41405 |
| 14. | Luggage Career Auto Riksha | KA-15-3689 | BGE251729 | RSE101639 |
| 15. | TVS Suzuki Byke | KA-31-E-3300 | 341894 | 356880 |
| 16. | Suzuki Byke | KA-14-K-1359 | 7712F934135 | 7712M980171 |
| 17. | Fiat Car | MH-09-A-7380 | PAX802104XDX | PAD137N3080 |
| 18. | Lorry | KA-36-180 | 363052352-386 | 692DO2363786 |
| 19. | Tempo Trax | KA-25-5330 | TX917041 | 093872 |
| 20. | Tempo Trax | KA-27-M-671 | NOT VISIBLE | NOT VISIBLE |
| 21. | Maruthi Van | KA-36-M-780 | 904307 | 730692 |
| 22. | Yamaha Crux Byke | KA-14-Q-9766 | 0265KA144101 | 5KA146101 |
| 23. | Bajaj CT-100 Byke | KA-31-K-5035 | BLM54844 | NOT VISIBLE |
| 24. | Ambassador | KA-14-M-417 | 111-646577 | H3027002 |
| 25. | Lorry | MH-04-H-7217 | 366359 | 378542 |

1) ಬಿಡ್ಡುದಾರರು ಮೂರು ಮತ್ತು ನಾಲ್ಕು ಚಕ್ರದ ಪ್ರತಿಯೊಂದು ವಾಹನದ ಬಿಡ್ಡಿಗೆ ರೂ.10,000/- ಹಾಗೂ ದ್ವಿಚಕ್ರ ವಾಹನಗಳಿಗೆ ತಲಾ ರೂ.5000/-ಗಳ ಮುಂಗಡ ಠೇವಣಿಯನ್ನು ಪ್ರತ್ಯೇಕವಾಗಿ ಹರಾಜು ಪ್ರಾರಂಭವಾಗುವ ಮುನ್ನ ಪಾವತಿಸಿ ರಶೀದಿಯನ್ನು ಪಡೆದು ಹರಾಜಿನಲ್ಲಿ ಭಾಗವಹಿಸತಕ್ಕದ್ದು.
2) ಟೆಂಡರ್ ಕಂ ಹರಾಜಿನಲ್ಲಿ ಭಾಗವಹಿಸುವ ಬಿಡ್ಡುದಾರರು ಚುನಾವಣಾ ಅಧಿಕಾರಿಗಳು ನೀಡಿದಂತೆ ಗುರುತಿನ ಚೀಟಿ, ಪಡಿತರ ಚೀಟಿ ಇಲ್ಲವೆ ಡ್ರೈವಿಂಗ್ ಲೈಸೆನ್ಸ್ ಇತ್ಯಾದಿಗಳ ಪ್ರತಿಯನ್ನು ಒಪ್ಪಿಸಿ ಭಾಗವಹಿಸತಕ್ಕದ್ದು.
3) ಟೆಂಡರ್ ಕಂ ಹರಾಜಿನಲ್ಲಿ ಜಯಶೀಲರಾದ ವ್ಯಕ್ತಿಗಳು ವಾಹನ ಖರೀದಿಸಿದ ಮೊತ್ತದ ಶೇ 50 ರಷ್ಟು ಹಣ ಮತ್ತು ಚಾಲ್ತಿ ದರದ ತೆರಿಗೆಯನ್ನು ಹರಾಜು ಮುಗಿದ ಕೂಡಲೇ ಪಾವತಿ ಮಾಡತಕ್ಕದ್ದು.
4) ಹರಾಜನ್ನು ಅಂಗೀಕರಿಸುವ ಮತ್ತು ತಿರಸ್ಕರಿಸುವ ಎಲ್ಲಾ ಅಧಿಕಾರವು ಈ ಕೆಳಸಹಿದಾರರಿಗೆ ಇದ್ದು ಎಲ್ಲಾ ವಿಚಾರಗಳಲ್ಲಿ ಅವರ ತೀರ್ಮಾನವೇ ಅಂತಿಮ ತೀರ್ಮಾನವಾಗಿರುತ್ತದೆ.
5) ಮೇಲೆ ತಿಳಿಸಿದ ವಾಹನಗಳು ಕೇವಲ ಅಂದಾಜು ಆಗಿದ್ದು, ಮೇಲೆ ಹೆಸರಿಸಿದ ವಾಹನಗಳಲ್ಲಿ ಯಾವುದಾದರೂ ವಾಹನಗಳನ್ನು ಇಲಾಖಾ ಉಪಯೋಗಕ್ಕಾಗಿ ಹಂಚಿಕೆ ಮಾಡಿದ್ದಲ್ಲಿ ಅಥವಾ ನ್ಯಾಯಾಲಯದಿಂದ ತಡೆಯಾಜ್ಞೆ ಬಂದಲ್ಲಿ ಅಥವಾ ಇನ್ಯಾವುದೇ ಕಾರಣಕ್ಕಾಗಿ ವಾಹನಗಳನ್ನು ಟೆಂಡರ್ ಕಂ ಹರಾಜಿನಿಂದ ಕೈಬಿಡಲಾಗುವುದು. ಅಲ್ಲದೇ ನ್ಯಾಯಾಲಯದಿಂದ ತಡೆಯಾಜ್ಞೆ ಬಂದಲ್ಲಿ ಅಂತಹ ವಾಹನಗಳನ್ನು ಟೆಂಡರ್ ಕಂ ಹರಾಜಿನಿಂದ ಕೈ ಬಿಡಬಹುದಾಗಿರುತ್ತದೆ.
6) ಟೆಂಡರ್ ಹಾಗೂ ಹರಾಜಿಗೆ ಪ್ರತ್ಯೇಕ ಇಎಂಡಿ ಕಟ್ಟತಕ್ಕದ್ದು. ಇಎಂಡಿ ಕಟ್ಟಿದ ವ್ಯಕ್ತಿಗಳಿಗೆ ಮಾತ್ರ ಹರಾಜಿನಲ್ಲಿ ಭಾಗವಹಿಸಲು ಅವಕಾಶವಿರುತ್ತದೆ.
7) ಹೆಚ್ಚಿನ ವಿವರಗಳನ್ನು ಈ ಕಛೇರಿಯಿಂದ ಕೆಲಸದ ವೇಳೆಯಲ್ಲಿ ಪಡೆಯಬಹುದಾಗಿರುತ್ತದೆ.

ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ

ಪಿ.ಆರ್. 18

